

ಕನ್ನಡ ವಿಶ್ವವಿದ್ಯಾನಿಲಯ
ಹಂಪಿ

೨೦೧೩-೨೦೧೪ ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ರೂಪ ಹಾಸನ ಅವರ ಕವಿತೆಗಳ ವಿಚಾರ – ವಿಮರ್ಶೆ

ನಿಬಂಧಕರು

**ಕೆಂಪಹೊನ್ನಯ್ಯ**
**ನೋಂ. ಸಂ. : KVTMKS -೦೦೬೭೦**
ಎಂ.ಫಿಲ್ ಸಂಶೋಧನಾ ವಿದ್ಯಾರ್ಥಿ
ಕುವೆಂಪು ಟ್ರಸ್ಟ್, ಮೈಸೂರು-೧೨

ಮಾರ್ಗದರ್ಶಕರು

**ಡಾ. ಹೆಚ್.ಪಿ. ಗೀತಾ**
ಕನ್ನಡ ಸಹಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪು ನಗರ, ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



೨೦೧೩- ೨೦೧೪



ಕನ್ನಡ ವಿಶ್ವವಿದ್ಯಾನಿಲಯ

ಹಂಪಿ

೨೦೧೩-೨೦೧೪ ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ರೂಪ ಹಾಸನ ಅವರ ಕವಿತೆಗಳ ವಿಚಾರ – ವಿಮರ್ಶೆ

ನಿಬಂಧಕರು

**ಕೆಂಪಹೊನ್ನಯ್ಯ**

**ನೋಂ. ಸಂ. : KVTMKS -೦೦೬೭೦**

ಎಂ.ಫಿಲ್ ಸಂಶೋಧನಾ ವಿದ್ಯಾರ್ಥಿ

ಕುವೆಂಪು ಟ್ರಸ್ಟ್, ಮೈಸೂರು-೧೨

ಮಾರ್ಗದರ್ಶಕರು

**ಡಾ. ಹೆಚ್.ಪಿ. ಗೀತಾ**

ಕನ್ನಡ ಸಹಪ್ರಾಧ್ಯಾಪಕರು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಕುವೆಂಪು ನಗರ, ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೩- ೨೦೧೪

## ದೃಢೀಕರಣ ಪತ್ರ

೨೦೧೩-೧೪ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS – ೦೦೬೭೦೮** ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಕೆಂಪಹೊನ್ನಯ್ಯ** ಅವರು ನನ್ನ ಮಾರ್ಗದರ್ಶನದಲ್ಲಿ **"ರೂಪ ಹಾಸನ ಅವರ ಕವಿತೆಗಳ ವಿಚಾರ – ವಿಮರ್ಶೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಗೀತಾ ಎಚ್.ಪಿ

(ಡಾ. ಹೆಚ್.ಪಿ. ಗೀತಾ)
ಕನ್ನಡ ಸಹಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪು ನಗರ, ಮೈಸೂರು

ಸ್ಥಳ : ಮೈಸೂರು
ದಿನಾಂಕ : ೧೯/೦೭/೧೪

# ಅಭ್ಯರ್ಥಿಯ ಘೋಷಣಾ ಪತ್ರ

**"ರೂಪ ಹಾಸನ ಅವರ ಕವಿತೆಗಳ ವಿಚಾರ – ವಿಮರ್ಶೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಯ (ನೋಂದಣಿ ಸಂಖ್ಯೆ **KVTMKS – ೦೦೬೭೦**) ವಿದ್ಯಾರ್ಥಿಯಾದ ನಾನು ೨೦೧೩–೧೪ನೇ ಸಾಲಿನ ಪರೀಕ್ಷೆಗಾಗಿ ಡಾ. ಹೆಚ್.ಪಿ. ಗೀತಾ, ಕನ್ನಡ ಸಹಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುವೆಂಪು ನಗರ, ಮೈಸೂರು ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಡಿಸಿದ್ದೇನೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಕೆಂಪಹೊನ್ನಯ್ಯ)

ಸ್ಥಳ : ಮೈಸೂರು

ದಿನಾಂಕ : ೧೨೨-೦೭-೨೦೧೪ ೨೦೧೩–೧೪ನೇ ಸಾಲಿನ ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು – ೧೨.

## 'ರೂಪ ಹಾಸನ ಅವರ ಕವಿತೆಗಳ ವಿಚಾರ – ವಿಮರ್ಶೆ'

## ಪರಿವಿಡಿ

ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯವು ನಿಂತ ನೀರಲ್ಲ; ಅದು ಕಾಲದಿಂದ ಕಾಲಕ್ಕೆ ಒದಗಿ ಬರುವ ಸ್ಥಿತ್ಯಂತರಗಳನ್ನು, ಬದಲಾವಣೆಗಳನ್ನು ತನ್ನಲ್ಲಿ ಗರ್ಭಿಕರಿಸಿಕೊಂಡು, ಸಮಕಾಲೀನ ಸನ್ನಿವೇಶಗಳಿಗೆ ತುಡಿಯುವುದು ಅದರ ಗುಣಧರ್ಮವಾಗಿರುತ್ತದೆ. ಇದು ಯಾವುದೇ ಜೀವಂತ ಭಾಷೆಯ ಮನೋಧರ್ಮವಾಗಿರುತ್ತದೆ. ಈ ದೃಷ್ಟಿಯಿಂದ ಕನ್ನಡ ಭಾಷೆ ಮತ್ತು ಸಾಹಿತ್ಯವು ಪ್ರಾಚೀನ ಕಾಲದಿಂದ ಈವರೆಗೆ ವಿಭಿನ್ನ ಆಯಾಮಗಳಲ್ಲಿ ಪ್ರಕಟಗೊಳ್ಳುತ್ತಾ ಅಂದಂದಿನ ಪರಿಸರಕ್ಕೆ ಪೂರಕವಾಗಿ ಸಾಂಸ್ಕೃತಿಕ ಮೌಲ್ಯಗಳನ್ನು, ಧಾರ್ಮಿಕ ಸ್ಥಿತಿಗತಿಗಳನ್ನು, ಮನುಷ್ಯ ಪರವಾದ ಮೌಲ್ಯಗಳನ್ನು, ವೈಚಾರಿಕ ಪ್ರಜ್ಞೆಯನ್ನು ಅಭಿವ್ಯಕ್ತಗೊಳಿಸುತ್ತಾ ಬಂದಿರುತ್ತದೆ. ಪಂಪ ಯುಗ, ಬಸವ ಯುಗ, ಹರಿಹರ ಯುಗ, ಕುಮಾರವ್ಯಾಸ ಯುಗ, ಆಧುನಿಕ ಯುಗ – ಹೀಗೆ ಕನ್ನಡ ಸಾಹಿತ್ಯ ಬೆಳೆದು ಬಂದ ಬಗೆಯನ್ನು ಕವಿಚರಿತ್ರೆಕಾರರು ಗುರುತಿಸಿದ್ದಾರೆ. ಈ ಸಂದರ್ಭದಲ್ಲಿ ಕವಿ ಕೇಂದ್ರಿತ ವಿಭಾಗ ಕ್ರಮವಲ್ಲದೆ ಧರ್ಮ ಕೇಂದ್ರಿತ, ಪ್ರಕಾರ ಕೇಂದ್ರಿತ, ಗುಣಕೇಂದ್ರಿತ ಇತ್ಯಾದಿ ಮಾನದಂಡಗಳ ಮೇಲೆ ಇಡೀ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಧ್ಯಯನದ ಅನುಕೂಲಕ್ಕಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ವಿವರಣೆಯು ಕನ್ನಡ ಸಾಹಿತ್ಯ ಕಾಲಧರ್ಮಕ್ಕೆ ಅನುಗುಣವಾಗಿ ವಿಕಾಸ ಹೊಂದಿದ ಪರಿಯನ್ನು ಪ್ರಚುರಪಡಿಸುತ್ತದೆ.

ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಇಂಗ್ಲೀಷ್ ಸಾಹಿತ್ಯದ ಪ್ರೇರಣೆಯಿಂದ, ಆಧುನಿಕ ಶಿಕ್ಷಣದ ಪ್ರಭಾವದಿಂದ ಜಾಗತಿಕ ಮಟ್ಟದಲ್ಲಾದ ಬದಲಾವಣೆಗಳಿಂದ ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂಶೋಧನೆಯ ಫಲವಾಗಿ ಕನ್ನಡದಲ್ಲಿ ಹೊಸಗನ್ನಡ ಸಾಹಿತ್ಯ ನಿರ್ಮಿತಿ ಪ್ರಾರಂಭವಾಯಿತು. ಈ ನಿಟ್ಟಿನಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಸಾಹಿತ್ಯ ಪಂಥಗಳು ತನ್ನ ವಿಭಿನ್ನ ಆಲೋಚನೆಗಳೊಂದಿಗೆ ಜನಾಂಗಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳೊಂದಿಗೆ ಮೈದಳೆದವು. ನವೋದಯ ಸಂದರ್ಭದಲ್ಲಿ ರಾಷ್ಟ್ರೀಯತೆ, ವಸಾಹತುಶಾಹಿಗೆ ಪ್ರತಿಕ್ರಿಯೆ, ನಿಸರ್ಗವರ್ಣನೆ, ಆದರ್ಶ ಜೀವನ, ಕನಸುಗಾರಿಕೆ ಇತ್ಯಾದಿ ಅಂಶಗಳು ಮುಖ್ಯ ತುಡಿತಗಳಾಗಿದ್ದವು. ಪ್ರಗತಿಶೀಲ ಪಂಥವು ಸಮಾಜಮುಖಿ ಧೋರಣೆಗಳೊಂದಿಗೆ ವಾಸ್ತವಿಕ ನೆಲೆಗಟ್ಟಿನಲ್ಲಿ ತನ್ನ ಆಯಾಮಗಳನ್ನು ಕಂಡುಕೊಂಡಿತು. ನವ್ಯ ಕವಿಗಳು ಕಾವ್ಯ ಪ್ರತಿಮೆಯನ್ನು ತನ್ನ ಅಭಿವ್ಯಕ್ತಿ ಸಾಧನವಾಗಿಸಿಕೊಂಡು ವೇಷ್ಟಿಪ್ರಜ್ಞೆಯಲ್ಲಿ ಸಾಹಿತ್ಯ ಕೃಷಿ ನಡೆಸಿದರು. ಇವರು ಭಾಷೆಯನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡರು. ಮುಂದೆ ದಲಿತ – ಬಂಡಾಯ ಸಾಹಿತ್ಯ ಪಂಥಗಳು, ವಿವಿಧ ಜನಾಂಗಗಳ ಸಾಂಸ್ಕೃತಿಕ ಹುಡುಕಾಟಗಳೊಂದಿಗೆ ಹೊಸ ಬಗೆಯಲ್ಲಿ ಪ್ರಾರಂಭವಾದವು. ಈ ಕಾಲಘಟ್ಟದಲ್ಲೇ ಅಂದರೆ, ೧೯೭೦ ರಿಂದೀಚೆಗೆ ದಲಿತ ಸಂವೇದನೆ, ಸ್ತ್ರೀ

ಸಂವೇದನೆ, ಮುಸ್ಲಿಂ ಸಂವೇದನೆ, ಮಾರ್ಕ್ಸ್‌ವಾದಿ ಚಿಂತನೆಗಳು ಹೆಚ್ಚು ಪ್ರವರ್ಧಮಾನಕ್ಕೆ ಬಂದವು. ಇಲ್ಲಿ ಸ್ತ್ರೀ ಕುಲದ ಅನನ್ಯತೆಯನ್ನು ಪ್ರಚುರಪಡಿಸಬೇಕೆಂಬ ಆಶಯದೊಂದಿಗೆ ಸ್ತ್ರೀವಾದಿ ಸಾಹಿತ್ಯ ಚಳುವಳಿ ಆರಂಭವಾಯಿತು. ಹಾಗೆ ನೋಡಿದರೆ ೨೦ನೇ ಶತಮಾನದ ಪ್ರಾರಂಭದಲ್ಲೇ ನಂಜನಗೂಡಿನ ತಿರುಮಲಾಂಬ, ಆರ್. ಕಲ್ಯಾಣಮ್ಮ, ತಿರುಮಲೈ ರಾಜಮ್ಮ, ತ್ರಿವೇಣಿ, ಎಂ.ಕೆ. ಇಂದಿರಾ, ಅನುಪಮಾ ನಿರಂಜನ ಇನ್ನೂ ಮುಂತಾದವರು ತಮ್ಮ ವಿವಿಧ ಕೃತಿಗಳಲ್ಲಿ ಸ್ತ್ರೀ ಸಂವೇದನೆಯನ್ನು ಪ್ರಕಟಿಸಿದ್ದಾರೆ. ೧೯೭೦ರಿಂದೀಚೆಗೆ ೭೨ ರಲ್ಲಿ ಶೈಲಜಾ ಉಡಚಣ, ೧೯೭೬ರಲ್ಲಿ ಮಾಲತಿ ಪಟ್ಟಣಶೆಟ್ಟಿ ಮತ್ತು ಎನ್.ವಿ. ಭಾಗ್ಯಲಕ್ಷ್ಮಿ, ೧೯೭೮ರಲ್ಲಿ ಕಮಲ ಹೆಮ್ಮಿಗೆ, ೧೯೮೩ರಲ್ಲಿ ಪ್ರತಿಭಾ ನಂದಕುಮಾರ್, ೧೯೮೮ರಲ್ಲಿ ಚ. ಸರ್ವಮಂಗಳಾ ತಮ್ಮ ಮೊದಲ ಕವನ ಸಂಕಲನಗಳನ್ನು ಹೊರತಂದರು. ಈ ಎಲ್ಲಾ ಮಹಿಳಾ ಲೇಖಕರಿಗೆ ಹನ್ನೆರಡನೆ ಶತಮಾನದ ಅಕ್ಕಮಹಾದೇವಿಯ ವೀರೋಚಿತ ಹೋರಾಟ, ವಚನಕಾರ್ತಿಯರ ಆಲೋಚನೆಗಳು, ೧೭ನೇ ಶತಮಾನದ ಸಂಚಿಹೊನ್ನಮ್ಮ, ೨೦ನೇ ಶತಮಾನದ ಕೆಲವು ಮಹಿಳಾ ಲೇಖಕರು, ಸ್ಫೂರ್ತಿಯ ಸೆಲೆಯಾಗಿ ನಿಂತಿರುವುದನ್ನು ಗುರುತಿಸಬಹುದಾಗಿದೆ. ಇದರೊಂದಿಗೆ ಜಾಗತಿಕವಾಗಿ ಸಿಮೋಂದ ಭೋವ (The Second Sex) ಕೇಟ್ ಮಿಲೆಟ್ (Sexual Politics) ಮುಂತಾದವರ ಉಗ್ರ ಸ್ತ್ರೀವಾದಿ ಚಿಂತನೆಗಳು ಕನ್ನಡ ಮಹಿಳಾ ಲೇಖಕರ ಮೇಲೆ ದಟ್ಟ ಪ್ರಭಾವವನ್ನು ಬೀರಿದವು.

ಪ್ರಸ್ತುತ ಸಂದರ್ಭದಲ್ಲಿ ಎಚ್.ಎಲ್. ಪುಷ್ಪ, ಮಲ್ಲಿಕಾ ಘಂಟಿ, ಡಾ. ವಿಜಯದಬ್ಬೆ, ಕಮಲಾ ಹಂಪನಾ, ಶಾಂತದೇವಿ ಮಾಳವಾಡ, ಸಾ.ರಾ. ಅಬೂಬಕ್ಕರ್, ಬಿ.ಟಿ. ಲಲಿತನಾಯಕ್, ಗುಡಿಬಂಡೆ ಪೂರ್ಣಿಮಾ ಇನ್ನೂ ಮುಂತಾದವರು ಪುರುಷ ಕೇಂದ್ರಿತ ಸಮಾಜ ಮತ್ತು ಸಂಸ್ಕೃತಿಯನ್ನು ಪ್ರಶ್ನಿಸುವ ಮುಖೇನ ಸ್ತ್ರೀವಾದಿ ನೆಲೆಗಟ್ಟಿನಲ್ಲಿ ಅತ್ಯಂತ ಸಮರ್ಥವಾಗಿ ಬರೆಯುತ್ತಿದ್ದರು. ಈ ಹಿನ್ನೆಲೆಗೆ ವಿಭಿನ್ನವಾಗಿ ಪ್ರಸ್ತುತ ಸಂದರ್ಭದಲ್ಲಿ ರೂಪ ಹಾಸನ ಅವರು ಸ್ತ್ರೀವಾದಿ ನೆಲೆಗಟ್ಟನ್ನು ಮೀರಿಸುವಂತಹ ದೃಷ್ಟಿಕೋನದೊಂದಿಗೆ ಕಾವ್ಯ ಕೃಷಿಯಲ್ಲಿ ತೊಡಗಿದ್ದಾರೆ. ಈ ಹಿಂದಿನ ಮಹಿಳಾ ಲೇಖಕರು, ಸ್ತ್ರೀವಾದಿ ಚಿಂತಕರು, ಪುರುಷಾಧಾರಿತ ವ್ಯವಸ್ಥೆಯನ್ನು ಅತ್ಯಂತ ಉಗ್ರವಾದ ನೆಲೆಯಲ್ಲಿ ಪ್ರಶ್ನಿಸುವ ಮುಖೇನ ಮಹಿಳೆಯ ಮೇಲಿನ ಅವನ ದೌರ್ಜನ್ಯ – ದಬ್ಬಾಳಿಕೆಗಳನ್ನು ದಾಖಲಿಸಿದರು. ಆದರೆ ರೂಪ ಹಾಸನ ಅವರು ಉಗ್ರಮಾರ್ಗವನ್ನು ಕೈಬಿಟ್ಟು ಸೌಮ್ಯವಾದ ರೀತಿಯಲ್ಲಿ ಪುರುಷ ಕೇಂದ್ರಿತ ವ್ಯವಸ್ಥೆಯನ್ನು ಪ್ರಶ್ನಿಸುತ್ತಿರುವ ಅವರ ಸಾಹಿತ್ಯದ ವಿಭಿನ್ನ ಆಯಾಮಗಳನ್ನು, ದೃಷ್ಟಿಕೋನಗಳನ್ನು ವಿಮರ್ಶೆಗೆ ಒಳಪಡಿಸುವುದು ಪ್ರಕೃತ ನಿಬಂಧದ ಉದ್ದೇಶವಾಗಿದೆ.

ರೂಪ ಹಾಸನ ಅವರು ಈವರೆಗೆ ಪ್ರಕಟಿಸಿರುವ 'ಒಂದಿಷ್ಟು ಹಸಿಮಣ್ಣು' (೨೦೦೦), 'ಬಾಗಿಲಾಚೆಯ ಮೌನ' (೨೦೦೫), 'ಕಡಲಿಗೆಷ್ಟೊಂದು ಬಾಗಿಲು', (೨೦೧೦) ಹಾಗೂ 'ಗಳಿಗೆ ಬಟ್ಟಲ

ತಿರುವುಗಳಲ್ಲಿ' (೨೦೧೦) ಈ ನಾಲ್ಕು ಕವನ ಸಂಕಲನಗಳ ತಲಸ್ಪರ್ಶಿ ವಿಮರ್ಶೆಯು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ. ಲೇಖಕರು ಅಭಿವ್ಯಕ್ತಗೊಳಿಸಿರುವ ಸ್ತ್ರೀ ಬದುಕಿನ ಅಸ್ಮಿತೆಯ ನೆಲೆಗಳನ್ನು, ಮಹಿಳೆಯರ ಮಾನಸಿಕ ಒಳತೋಟಿಯನ್ನು, ಸ್ತ್ರೀ ಸಂವೇದನೆಗಳನ್ನು ಪರಿಶೀಲಿಸುವ ಮುಖೇನ ಕವಯತ್ರಿ ಅವರ ಕವಿತೆಯ ವೈಶಿಷ್ಟ್ಯಗಳನ್ನು ವ್ಯಾಸಾಂಗ ಮಾಡುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ರೂಪ ಅವರು ತಮ್ಮ ಕವಿತೆಗಳಲ್ಲಿ ಅತ್ಯಂತ ಧ್ವನಿ ಪೂರ್ಣವಾಗಿ ಬಳಸಿರುವ ರೂಪಕಗಳನ್ನು ಪ್ರತಿಮೆಗಳನ್ನು, ಇವುಗಳಿಂದ ಹೊರಡುವ ಅರ್ಥ ವಿಸ್ತಾರಗಳನ್ನು ಕೂಲಂಕುಷವಾಗಿ ಚರ್ಚಿಸುವ ವ್ಯಾಪ್ತಿಯನ್ನು ಅಧ್ಯಯನವು ಒಳಗೊಂಡಿರುತ್ತದೆ.

ಪುರುಷ ಕೇಂದ್ರಿತ ಧಾರ್ಮಿಕ ವ್ಯವಸ್ಥೆಯನ್ನು, ಅವನು ಹಾಕಿರುವ ಸಾಂಸ್ಕೃತಿಕ ಬೇಲಿಗಳನ್ನು, ಸಾಮಾಜಿಕ ಕಟ್ಟುಪಾಡುಗಳನ್ನು ಲೇಖಕರು ಯಾವ ಧಾಟಿಯಲ್ಲಿ ಪ್ರಶ್ನಿಸುತ್ತಾರೆ, ಸೀಳುತ್ತಾರೆ ಎಂಬಿತ್ಯಾದಿ ಸಂಗತಿಗಳನ್ನು ವಿಮರ್ಶಿಸುವ ಮುಖೇನ ರೂಪ ಹಾಸನ ಅವರು ಏನನ್ನು ಹೇಳಲು ಹೊರಟಿದ್ದಾರೆ? ಅವರು ಪ್ರತಿಪಾದಿಸುತ್ತಿರುವ ಮೌಲ್ಯಗಳಾದರೂ ಏನು? ಸ್ತ್ರೀ ಕುಲಕ್ಕೆ ಕಾವ್ಯದ ಮುಖೇನ ಏನನ್ನು ಕೊಡಲು ಹಂಬಲಿಸುತ್ತಿದ್ದಾರೆ? ಈ ಎಲ್ಲಾ ವಿಚಾರಗಳನ್ನು ನನ್ನ ಅಧ್ಯಯನದ ವ್ಯಾಪ್ತಿ ಒಳಗೊಂಡಿದ್ದು, ಸುದೀರ್ಘವಾಗಿ ಚರ್ಚಿಸುವ ಉದ್ದೇಶಗಳನ್ನು ಪ್ರಬಂಧವು ಹೊಂದಿರುತ್ತದೆ. ಈ ನಿಬಂಧವು ರೂಪ ಹಾಸನ ಅವರ ಕಾವ್ಯದಲ್ಲಿ ಮಹಿಳಾ ನೆಲೆಗಳನ್ನು 'ಸ್ತ್ರೀವಾದಿ ಪ್ರಜ್ಞೆ'ಯನ್ನು ಶೋಧಿಸುವುದು ಮಾತ್ರವಲ್ಲದೆ ಕವಿತೆಗಳಲ್ಲಿ ಮೈದಳೆದಿರುವ ಸಾಮಾಜಿಕ ಆಯಾಮಗಳನ್ನು, ಕವಿತೆ ನಿರ್ಮಿಸಲು ಬಳಸಿಕೊಂಡಿರುವ ರೂಪಕ – ಪ್ರತಿಮೆಗಳನ್ನು, ಪ್ರತಿಪಾದಿತವಾಗಿರುವ ಜೀವನ ಮೌಲ್ಯಗಳನ್ನು, ಸಾಂಸ್ಕೃತಿಕ ಅನನ್ಯತೆಯನ್ನು, ಲೇಖಕರ ಬದುಕು ಮತ್ತು ಕಾವ್ಯದ ಸಂಬಂಧವನ್ನು ಕುರಿತಂತೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡುತ್ತದೆ.

ಒಟ್ಟಾರೆ, ಪ್ರಸ್ತುತ ಸಂಪ್ರಬಂಧವು ನೂತನ ಸಹಸ್ರಮಾನದ ಆರಂಭದಿಂದ ಕಾವ್ಯರಚನೆಗೆ ತೊಡಗಿರುವ ರೂಪ ಹಾಸನ ಅವರ ಕವಿತಾ ಪ್ರಪಂಚದ ಕಾಳಜಿಗಳನ್ನು, ವೈಶಿಷ್ಟ್ಯಗಳನ್ನು, ಲೇಖಕರ ಮನದಾಳದ ಹಂಬಲವನ್ನು, ಸಾಂಸ್ಕೃತಿಕ ಆವರಣವನ್ನು, ಪ್ರತಿಮೆಗಳ ಬಳಕೆಗಳಲ್ಲಿನ ನೈಪುಣ್ಯತೆಯನ್ನು, ಹೆಣ್ಣಿನ ಬದುಕಿನ ಅಸ್ಮಿತೆಯ ವಿಭಿನ್ನ ನೆಲೆಗಳನ್ನು ವೈಚಾರಿಕವಾಗಿ ಯಾವುದೇ ಪೂರ್ವಾಗ್ರಹ ಪೀಡಿತ ಭಾವನೆಗಳಿಲ್ಲದೆ ಸುದೀರ್ಘವಾದ ಚರ್ಚೆಗೊಳಪಡಿಸುವ ಉದ್ದೇಶ ಮತ್ತು ವ್ಯಾಪ್ತಿಯನ್ನು, ಪ್ರಕೃತ ನಿಬಂಧವು ಒಳಗೊಂಡಿರುತ್ತದೆ.

## ಅಧ್ಯಾಯ – ೨

# ರೂಪ ಹಾಸನ ಅವರ ಕವಿತೆಗಳಲ್ಲಿ ಸ್ತ್ರೀ ಅಸ್ಮಿತೆಯ ನೆಲೆಗಳು

**"ಕೈಯಿಂದ ಆಗದ್ದ**
**ಬಾಯಿಂದ ಆಡಿ ತೋರಿಸಿದರೆ ಬಜಾರಿ**
**ಬಾಯಿಂದ ಆಡಲಾಗದ್ದ**
**ಕೈಯಿಂದ ಬರೆದು ತೋರಿಸಿದರೆ ಕವಯತ್ರಿ"**

ಕನ್ನಡ ಭಾಷೆ ಮತ್ತು ಸಾಹಿತ್ಯವು ವಿವಿಧ ಕಾಲಘಟ್ಟಗಳಲ್ಲಿ ಅನೇಕ ವೈವಿಧ್ಯತೆಗಳನ್ನು, ಒಲವು – ಚೆಲುವುಗಳನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಎರಗಿಬಂದ ಪ್ರಭಾವಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡು ವಿಕಾಸಹೊಂದುತ್ತಾ ಬಂದಿರುತ್ತದೆ. ಇದು ಯಾವುದೇ ಜೀವಂತ ಭಾಷೆಯ ಮನೋಧರ್ಮವಾಗಿರುತ್ತದೆ. ಸಮಕಾಲೀನ ಪ್ರಜ್ಞೆಗೆ, ಮೌಲ್ಯಗಳಿಗೆ, ಸನ್ನಿವೇಶಗಳಿಗೆ ತನ್ನನ್ನು ತಾನು ಒಡ್ಡಿಕೊಳ್ಳುವುದು ಕನ್ನಡದ ಆಂತರ್ಯದಲ್ಲೇ ಅಡಕವಾಗಿದೆ. ಪರಿಣಾಮವಾಗಿ ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿಂದ ಹಾಗೂ ಜಾಗತಿಕ ಮಟ್ಟದಲ್ಲಿ ಸಂಭವಿಸಿದ ಸ್ಥಿತ್ಯಂತರಗಳಿಂದ ಕನ್ನಡದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ – ಬಂಡಾಯ, ಈ ರೀತಿಯ ಸಾಹಿತ್ಯ ಪಂಥಗಳು ತಮ್ಮ ವಿಭಿನ್ನ ಆಲೋಚನೆಗಳೊಂದಿಗೆ ಮೈದಳೆದವು. ಎಪ್ಪತ್ತರ ದಶಕದಿಂದಾಚೆಗೆ ಕನ್ನಡದಲ್ಲಿ ದಲಿತ ಸಂವೇದನೆ, ಸ್ತ್ರೀವಾದಿ ಸಂವೇದನೆ ಹಾಗೂ ಮುಸ್ಲಿಂ ಸಂವೇದನೆಗಳು ಪರಿಣಾಮಕಾರಿಯಾಗಿ ಅಭಿವ್ಯಕ್ತಿಯಾಗತೊಡಗಿದವು. ಈ ಸಂದರ್ಭದಲ್ಲಿ ಪುರುಷ ಕೇಂದ್ರಿತ ಮೌಲ್ಯಗಳನ್ನು ಪ್ರಶ್ನಿಸುವ ದೃಷ್ಟಿಕೋನದೊಂದಿಗೆ ಸ್ತ್ರೀವಾದ ಸಾಹಿತ್ಯ ಚಳುವಳಿಯು ಮೊದಲುಗೊಂಡಿತು.

ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ಪರಂಪರೆಯನ್ನು ಮಹಾದೇವಿ 'ಅಕ್ಕ'ನಿಂದಲೇ ಗುರುತಿಸಲಾಗುತ್ತದೆ. ಅಂದು ಕೌಶಿಕರಾಜನ ವಿರುದ್ಧ ಸಿಡಿದೆದ್ದು, ಸಾವಿಲ್ಲದ, ಕೇಡಿಲ್ಲದ ಶ್ರೀ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ಸ್ವೀಕರಿಸಲು ಹೊರಟ ಅಕ್ಕಮಹಾದೇವಿಯ ಆಂತರ್ಯದ ಮನೋಧೋರಣೆ ಒಂದು ರೀತಿಯಲ್ಲಿ ಸ್ತ್ರೀವಾದಕ್ಕೆ ಹಿಡಿದ ಕನ್ನಡಿಯಾಗಿದೆ. ಮುಂದೆ ಹದಿನೇಳನೇ (೧೭) ಶತಮಾನದ ಸಂಚಿಹೊನ್ನಮ್ಮ "ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ/ಪೆಣ್ಣಲ್ಲವೆ ಪೊರೆದವಳು/ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು/ಕಣ್ಣು ಕಾಣದ ಗಾವಿಲರು/ಕುವರನಾದೊಡೆ ಬಂದ ಗುಣವೇನದರಿಂದ/ಕುವರಿಯಾದೊಡೆ ಕುಂದೇನು?"[೧] ಎಂದು ಪುರುಷನಲ್ಲಿದ್ದ ಹೆಣ್ಣಿನ ಬಗೆಗಿನ ಅಸಡ್ಡೆಯನ್ನು ಪ್ರಶ್ನಿಸುತ್ತಾಳೆ. ಹೀಗೆ, ಹಳೆಗನ್ನಡ ಮತ್ತು ನಡುಗನ್ನಡ ಸಾಹಿತ್ಯ ಸಂದರ್ಭದಲ್ಲಿ ಅಲ್ಲೊಮ್ಮೆ, ಇಲ್ಲೊಮ್ಮೆ ಮಿಂಚಿದ ಸ್ತ್ರೀವಾದಿ ಪ್ರಜ್ಞೆಯು ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ನಂಜನಗೂಡಿನ ತಿರುಮಲಾಂಬ, ಆರ್.ಕಲ್ಯಾಣಮ್ಮ,

ತಿರುಮಲೈರಾಜಮ್ಮ, ಎಂ.ಕೆ. ಇಂದಿರಾ, ತ್ರಿವೇಣಿ, ಜಯದೇವಿತಾಯಿಲಿಗಾಡೆ ಮುಂತಾದವರು ಸ್ತ್ರೀ ಆಂತರ್ಯದ ಅನನ್ಯತೆಯನ್ನು ಅನಾವರಣಗೊಳಿಸಲು ಪ್ರಯತ್ನಿಸಿದರು. ೧೯೭೦ರಿಂದೀಚೆಗೆ ತಮ್ಮ ಲೇಖನಿಯನ್ನು ಸಮರ್ಥವಾಗಿ ದುಡಿಸಿಕೊಳ್ಳುವ ಮುಖೇನ ಸ್ತ್ರೀಯಾತ್ಮಕ ದೃಷ್ಟಿಕೋನದೊಂದಿಗೆ ತೆರೆದುಕೊಂಡರು. ೧೯೭೨ರಲ್ಲಿ ಶೈಲಜಾ ಉಡಚಣ, ೧೯೭೬ರಲ್ಲಿ ಮಾಲತಿಪಟ್ಟಣಶೆಟ್ಟಿ ಮತ್ತು ಎನ್.ವಿ. ಭಾಗ್ಯಲಕ್ಷ್ಮಿ, ೧೯೭೮ರಲ್ಲಿ ಕಮಲ ಹೆಮ್ಮಿಗೆ, ೧೯೭೨ರಲ್ಲಿ ಪ್ರತಿಭಾನಂದಕುಮಾರ್, ೧೯೮೮ರಲ್ಲಿ ಚ. ಸರ್ವಮಂಗಳಾ ತಮ್ಮ ಮೊದಲ ಕವನಸಂಕಲನಗಳನ್ನು ಹೊರತಂದರು. ಪ್ರಸ್ತುತ ಡಾ. ವಿಜಯದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ಕಮಲಾಹಂಪನ, ಮಲ್ಲಿಕಾಘಂಟಿ, ಸವಿತಾ ನಾಗಭೂಷಣ, ಗೀತಾ ನಾಗಭೂಷಣ, ಬಿ.ಟಿ. ಲಲಿತನಾಯಕ್, ಡಾ. ಪದ್ಮಶೇಖರ್ ಮುಂತಾದವರು ಲೇಖಕಿಯರಾಗಿ, ವಿಮರ್ಶಕರಾಗಿ, ಸಂಶೋಧಕರಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಸ್ತ್ರೀವಾದಿ ಪ್ರಜ್ಞೆಯನ್ನು ತಮ್ಮ ಪ್ರಬಲ ಅಸ್ತ್ರವನ್ನಾಗಿಸಿಕೊಂಡು ಸ್ತ್ರೀ ಜಗತ್ತಿನ ಅಸ್ಮಿತೆಯನ್ನು ಸೃಜಿಸುತ್ತಿದ್ದಾರೆ.

೨೦ನ ಶತಮಾನದ ಕೊನೆಯಲ್ಲಿ ತಮ್ಮ ವಯೋಮಾನ ಪ್ರಾಪ್ತವಾದ ಅನುಭವಗಳೊಂದಿಗೆ, ವಿಶಿಷ್ಟ ಸಂವೇದನೆಗಳೊಂದಿಗೆ ಸ್ತ್ರೀವಾದವನ್ನು ಮೀರಿಸುವಂತಹ ನೆಲೆಗಟ್ಟಿನಲ್ಲಿ ಶ್ರೀಮತಿ ರೂಪ ಹಾಸನ ಅವರು ಕಾವ್ಯ ಕೃಷಿಗೆ ತೊಡಗಿ ಒಂದಿಷ್ಟು 'ಹಸಿಮಣ್ಣು' (೨೦೦೦), 'ಬಾಗಿಲಾಚೆಯ ಮೌನ' (೨೦೦೫), 'ಕಡಲಿಗೆಷ್ಟೊಂದು ಬಾಗಿಲು' (೨೦೧೦) ಹಾಗೂ 'ಗಳಿಗೆ ಬಟ್ಟಲ ತಿರುವುಗಳಲ್ಲಿ' (ಕಿರುಪದ್ಯಗಳ ರಚನೆ) ಎಂಬ ನಾಲ್ಕು ಕವನಸಂಕಲನಗಳನ್ನು ಹೊರತಂದಿದ್ದಾರೆ. ಸ್ವತಃ ರೂಪ ಅವರೇ ಹೇಳುವಂತೆ "ನನ್ನ ಸಾಹಿತ್ಯಕ್ಕೆ ಸ್ತೀವಾದ, ಸ್ತ್ರೀ ಸಂವೇದನೆ ಎಂಬಿತ್ಯಾದಿ ಅಂಕಿತನಾಮಗಳನ್ನು ನೀಡದೇ, ವಿಭಿನ್ನ ಆಯಾಮಗಳಲ್ಲಿ ನೋಡಿದಾಗ ಮಾತ್ರ ಕಾವ್ಯದ ಉತ್ಕೃಷ್ಟತೆ ತಿಳಿಯುತ್ತದೆ"[೨] ಎಂದಿದ್ದಾರೆ. ಆದರೂ ರೂಪ ಹಾಸನ ಅವರು ಪುರುಷ ಕೇಂದ್ರಿತ ಮೌಲ್ಯಗಳನ್ನು, ಯಜಮಾನ ಸಂಸ್ಕೃತಿಯನ್ನು ತುಂಬಾ ಸೂಕ್ಷ್ಮವಾಗಿ ತಮ್ಮ ಕವಿತೆಗಳ ಮುಖೇನ ವಿರೋಧಿಸುತ್ತಲೇ ಸ್ತ್ರೀ ಅಸ್ಮಿತೆಯನ್ನು, ಆಕೆಯ ಬದುಕಿನ ಅನನ್ಯತೆಯನ್ನು ದಿಗ್ದರ್ಶಿಸುತ್ತಾರೆ. ಈ ಸಂದರ್ಭದಲ್ಲಿ ಕವಯತ್ರಿ ತನ್ನ ಆಲೋಚನೆಗಳನ್ನು, ಸ್ತ್ರೀ ಪರವಾದ ನಿಲುವುಗಳನ್ನು ಹೊರಚೆಲ್ಲಲು ಗಂಡಿನ ವಿರುದ್ಧ ಸಂಘರ್ಷಕ್ಕೆ ಇಳಿಯುವುದಿಲ್ಲ.

ಸ್ತ್ರೀ ಪ್ರಜ್ಞೆಯನ್ನು ಪ್ರಕಟಿಸುವಾಗ ಮೈ ಪರಚಿಕೊಳ್ಳುವುದಿಲ್ಲ, ಗಂಟಲು ಹರಿದುಕೊಳ್ಳುವುದಿಲ್ಲ. ಅದಕ್ಕೆ ಬದಲಾಗಿ ಪರಿಣಾಮಕಾರಿಯಾದ ಭಾಷೆಯ ಮುಖೇನ, ವಿಶಿಷ್ಟವಾದ ರೂಪಕಗಳನ್ನು ಪ್ರತಿಮೆಗಳನ್ನು ಬಳಸಿಕೊಂಡು ಸೌಮ್ಯವಾದ ರೀತಿಯಲ್ಲಿಯೇ ಸ್ತ್ರೀ ಜಗತ್ತಿನ ಚೈತನ್ಯವನ್ನು, ಶ್ರೇಷ್ಠತೆಯನ್ನು ಅನುಲಕ್ಷಿಸುತ್ತಾರೆ. ಈ ಮುಂದಿನಂತೆ ರೂಪ ಅವರ ಸ್ತ್ರೀ ಸಂವೇದನೆಯ ನೆಲೆಗಳನ್ನು, ವಿಶಿಷ್ಟ ಅನುಭವಗಳನ್ನು, ಪುರುಷ – ಕೇಂದ್ರಿತ ವ್ಯವಸ್ಥೆಯ ಗ್ರಹಿಕೆಗಳನ್ನು ವಿವಿಧ ಸ್ತ್ರೀವಾದಿ ಬರಹಗಾರರ ಉದಾಹರಣೆಗಳೊಂದಿಗೆ ಚರ್ಚಿಸಲಾಗಿದೆ.

ಜಿನ್ ಮರಿನ್ ತನ್ನ 'A Male Guide to Women's Liberation' ಪುಸ್ತಕದಲ್ಲಿ ಹೇಳುವಂತೆ "ಸಂರಚನೆಯೊಳಗೆ ಸೇರಿದ ಸಾಂಸ್ಥಿಕ ರೂಪ ಪಡೆದ ಪುರುಷ ಕೇಂದ್ರಿತ ಚಿಂತನೆ, ತುಳಿತಕ್ಕೆ ನಾವು ಸವಾಲೆಸೆಯದೆ ಬಿಟ್ಟಾಗಲೆಲ್ಲ ತುಳಿತದ ಪ್ರಕ್ರಿಯೆಯಲ್ಲಿ ನಾವು ಭಾಗಿಗಳಾಗುತ್ತಿದ್ದೇವೆ. ಪುರುಷ ಕೇಂದ್ರಿತ ವಾಸವು ಜನಾಂಗವಾದ, ಜಾತಿವಾದ, ವರ್ಗವಾದಗಳಿಗಿಂತ ಸೂಕ್ಷ್ಮವಾಗಿ ಕೆಲಸ ಮಾಡುವುದರಿಂದ ಹಾಗೂ ವಂಚಿತರು, ವಂಚಕರ ಸ್ಪಷ್ಟವಿಭಾಗ, ಗುಂಪು, ಗೆಟ್ಟೋಸ್ ಸಾಧ್ಯವಾಗದಿರುವುದರಿಂದ ಸ್ತ್ರೀವಾದಿ ಪ್ರಜ್ಞೆಯ ಜಾಗೃತಿ ಮತ್ತು ಹೋರಾಟಕ್ಕೆ ಬೇಕಾದ ತಿಳಿವಳಿಕೆ ಮತ್ತು ಕಾರ್ಯವಿಧಾನವೂ ಕೂಡ ಬೇರೆ ಬಗೆಯದಾಗಿರುವುದು ಅನಿವಾರ್ಯವಾಗುತ್ತದೆ"[೩]. ಸ್ತ್ರೀವಾದಿ ಸಾಹಿತ್ಯವು ಸೃಜನೇತರ ಮತ್ತು ಸೃಜನಶೀಲ ಸಾಹಿತ್ಯವಾಗಿ ಮೂಡಿಬಂದಿದೆ. ಪ್ರಾಥಮಿಕವಾಗಿ ಇದು ಪುರುಷ ಮೌಲ್ಯಗಳನ್ನು ಪ್ರಶ್ನಿಸುವಂತದು. ಸಿಮೋನ್ ದ ಬೋವಾ ಹೇಳುತ್ತಾರೆ – "ಜಗತ್ತನ್ನು ಕಂಡು ತನಗೆಬೇಕಾದಂತೆ ಸೃಷ್ಟಿಸಿದ್ದಾನೆ. ಅವನ ದೃಷ್ಟಿಕೋನಕ್ಕೆ ಅನುಗುಣವಾಗಿ ಜಗತ್ತಿನ ನಿಯಂತ್ರಣ ಮಾಡುತ್ತಾನೆ".[೪] ಸ್ತ್ರೀವಾದಿ ಚಿಂತನ ಕ್ರಮವು ಮುಖ್ಯವಾಗಿ ಇಂತಹ ನೆಲೆಗಳಿಂದ ಪ್ರಾರಂಭವಾಗುತ್ತದೆ. ಜೊತೆಗೆ ಇದು ಸ್ತ್ರೀಗೆ ತನ್ನ ಸ್ತ್ರೀತತ್ವದ ಹುಡುಕಾಟದ ಪ್ರಯತ್ನವು ಕೂಡ ಆಗುತ್ತದೆ. ಇಂತಹ ಸ್ತ್ರೀವಾದಿ ಸಾಹಿತ್ಯ ಹುಟ್ಟಿಕೊಳ್ಳಲು ಚಾರಿತ್ರಿಕ ಸಂದರ್ಭಗಳು ಕಾರಣವಾಗಿವೆ. ರೂಪ ಹಾಸನರವರು ತಾವು ಸ್ತ್ರೀವಾದಿ ಚಿಂತಕಿಯಾಗಿ ಇದೇ ನಿಲುವುಗಳನ್ನು ಇಟ್ಟುಕೊಂಡಿರುವುದು ಗಮನಾರ್ಹವಾಗಿದೆ. ಅವರು ಕೂಡ ಪುರುಷ ನಿರ್ಮಿತ ಸಮಾಜ ಹಾಗೂ ಸಂಸ್ಕೃತಿಯಲ್ಲಿ ಏಕಪಕ್ಷೀಯ ಸ್ವಾರ್ಥವಿದೆ ಎಂದು ಹೇಳುತ್ತಾ; ನಮ್ಮ ಸಂಸ್ಕೃತಿ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ನಾವು ಕೊಂಚ ಯೋಚಿಸಿದರೆ ಈ ಸಮಾಜ, ಸಂಸ್ಕೃತಿಯನ್ನು ತಮಗೆ ಬೇಕೆಂದಂತೆ ಸೃಷ್ಟಿ ಮಾಡಿರುವವನು. ಪುರುಷ ಎಂದು ಹೆಣ್ಣನ್ನು ಸಂಸ್ಕೃತಿ ರಕ್ಷಕಳು ಎನ್ನುವುದರ ಬದಲು ಸಂಸ್ಕೃತಿ ನಿರ್ಮಾಪಕಗಳು ಎಂದು ಹೇಳಿಕೊಂಡಿದ್ದಾರೆ.

"ಇಲ್ಲಿಯೂ ಸ್ತ್ರೀಯತ್ವದ ಹುಡುಕಾಟವಿದೆ. ಸ್ತ್ರೀ ಪುರುಷ ಅಸಮಾನತೆಗೆ ಮುಂದೊಡ್ಡುವ ಜೈವಿಕ ಮೂಲವನ್ನು ನಾವಿಂದು ಪ್ರಶ್ನಿಸಬೇಕಾಗಿದೆ. ಜೈವಿಕ ಮೂಲ ಸಿದ್ಧಾಂತವು ಗಂಡಿನ ಜೈವಿಕ ರಚನೆಗಳು, ಅವನ ಗಂಡುತನ ಸೃಷ್ಟಿಸುತ್ತವೆ. ಹೆಣ್ಣುತನಕ್ಕಿಂತ ಶ್ರೇಷ್ಠವಾದುದೆಂದು ನಂಬುವಂತೆ ಒತ್ತಾಯಿಸುತ್ತದೆ. ಆದರೆ ಜೈವಿಕ ಸಾಕ್ಷಿ ಹೆಣ್ಣು ಗಂಡಿಗಿಂತ ಭಿನ್ನಳೆಂದು ಕಾಣಿಸುತ್ತದೆಯೆ ಹೊರತು ಕೀಳೆಂದಲ್ಲ. ಜೈವಿಕ ಸಂಗತಿಗಳಿಗೆ ಒಂದು ಮೌಲ್ಯ ಬರುವುದು ಸಾಮಾಜಿಕ ಕಟ್ಟುಕಟ್ಟಲೆಗಳಿಂದ, ವಿಧಿ ವಿಶೇಷಗಳಿಂದ ಎಂದು ಹೇಳಿದ್ದಾರೆ"[೫] (ಗಾಯಿತ್ರಿ ನಾವಡ). ಅದೇ ರೀತಿ ರೂಪ ಹಾಸನರವರು ಮುಖ್ಯವಾಗಿ ನಮ್ಮ ಕುಟುಂಬ ವ್ಯವಸ್ಥೆಯು ಅಸಮಾನತೆಯ ಆಧಾರದಲ್ಲಿ ನಿಂತಿರುವುದಾಗಿದೆ. ಇಲ್ಲಿ ಹುಟ್ಟಿನಿಂದಲೇ ಗಂಡು, ಹೆಣ್ಣು ಮಕ್ಕಳನ್ನು ಬೆಳೆಸುವ ವಿಧಾನದಲ್ಲಿ ಭಿನ್ನತೆ ಇದೆ. ಇಲ್ಲಿಂದಲೇ ಅಸಮಾನತೆಯ ಬೀಜ ಮೊಳಕೆಯೊಡೆದು ಸಮಾಜದಲ್ಲಿ ಬೆಳೆಯುತ್ತದೆ. ಮದುವೆಯಾಗಿ ಹೆಣ್ಣು ಗಂಡನ ಮನೆಗೆ ಹೋಗಿ ತನ್ನ ಹಿಂದಿನ ಪರಿಸರವನ್ನು ಮರೆತು, ಅಲ್ಲಿನ ಪರಿಸರವನ್ನೇ ತನ್ನ ಪರಿಸರವೆಂದು ನಂಬಿ ಆ ಕುಟುಂಬದ ಎಲ್ಲಾ

ಜವಾಬ್ದಾರಿಯನ್ನು ಗೃಹಕೃತ್ಯ, ಮನೆವಾರ್ತೆ, ಮಕ್ಕಳ, ವೃದ್ಧರ ಪಾಲನೆ ಇತ್ಯಾದಿ ಕಟ್ಟುಪಾಡಿನ ಹಿಂದೆ ಪುರುಷ ನಿರ್ಮಿತ ಸಮಾಜ ಹಾಗೂ ಸಂಸ್ಕೃತಿಯ ಏಕಪಕ್ಷೀಯ ಸ್ವಾರ್ಥವಿದೆ. ಇಲ್ಲಿಯು ಜೈವಿಕ ಆಯಾಮಗಳ ಜೈವಿಕ ಮೂಲ ಸಿದ್ಧಾಂತಗಳು ಗೋಚರವಾಗುತ್ತವೆ ಎಂದು ರೂಪಹಾಸನ ಅವರು ಹೇಳಿದ್ದಾರೆ. ಹೀಗಾಗಿ ಪುರುಷ ಪ್ರಧಾನ ವ್ಯವಸ್ಥೆಯ ಬಿಗು ಮತ್ತು ಪರಿಣಾಮಗಳು ಚರಿತ್ರೆಯ ಒಂದು ಘಟ್ಟಕ್ಕಿಂತ ಇನ್ನೊಂದು ಘಟ್ಟದಲ್ಲಿ ಭಿನ್ನವಾಗಿದ್ದುದ್ದು ಕಂಡುಬರುತ್ತದೆ. ಜೈವಿಕ ಸಹಜವೆಂದು ನಂಬಿಕೊಂಡು ಬಂದ ಅನೇಕ ಸಂಗತಿಗಳು ರೂಪ ಹಾಸನ ಅವರ ಹೇಳಿಕೆಯಿಂದ ಹೆಣ್ಣು ಸಾಂಸ್ಕೃತಿಕ ನಿರ್ಮಾಪಕಗಳು ಎನ್ನುವ ಮಾತು ಡಾ. ಎನ್. ಗಾಯತ್ರಿ ನಾವಡ ಅವರ ಸಾಮೂಹಿಕ, ಸಾಂಸ್ಕೃತಿಕ ನಿರ್ಮಾಣ ಎಂಬ ನಿಜವನ್ನು ಅರಿಯಬೇಕಾಗಿದೆ. ಒಟ್ಟಾರೆ, ಸ್ತ್ರೀವಾದ ಬಲವಾದ ನಂಬಿಕೆ ವಾಸ್ತವದ ಹುಡುಕುವಿಕೆಯೊಂದಿಗೆ ಸ್ತ್ರೀವಾದ ನೆಲೆಯನ್ನು ತಾತ್ವಿಕ ಪ್ರಶ್ನೆಯಾಗಿ ಸ್ವೀಕರಿಸಿ, ಸಮಸಂಸ್ಕೃತಿಯ ಸ್ಥಾಪನೆಗಾಗಿ ಕ್ರಿಯಾತ್ಮಕವಾಗಿ, ಹೋರಾಟವಾಗಿ ಮುಂದುವರೆಯುತ್ತದೆ. ಪ್ರಪಂಚದ ಎಲ್ಲಾ ಜನಾಂಗಗಳಲ್ಲಿ ಹೆಣ್ಣಿನ ಶೋಷಣೆ ಒಂದು ಸಾಮಾನ್ಯ ಸಂಗತಿಯಾಗಿ ಅರಿವಿಗೆ ಬರುತ್ತದೆ.

ಇದಕ್ಕೆ ತನ್ನದೆಯಾದ ಚರಿತ್ರೆ ಇದೆ. ಮಾರ್ಕ್ಸ್‌ವಾದಿಗಳು ಹೇಳುವ ಸ್ತ್ರೀಯರ ಐತಿಹಾಸಿಕ ಪರಾಜಯದ ನಂತರ ಮಾತೃಪ್ರಧಾನ ಸಂಸ್ಕೃತಿಯಿಂದ ಪಿತೃಪ್ರಧಾನ ಸಂಸ್ಕೃತಿಗೆ ಪರಿವರ್ತನೆಯಾದ ಕಾಲಾನಂತರದಿಂದಲೂ ಇದನ್ನು ಗಮನಿಸಬಹುದು. ಎಲ್ಲಾ ನಾಗರೀಕತೆಗಳಲ್ಲೂ ಕೂಡ ಹೆಣ್ಣಿನ ಬಗ್ಗೆ ಹೀನಾಯ ಕಲ್ಪನೆ, ಎರಡನೇ ದರ್ಜೆಯ ವ್ಯಕ್ತಿಯಾಗಿ ಕಾಣುವ ಪ್ರವೃತ್ತಿ ಇದ್ದೇ ಇದೆ. ರೂಪ ಹಾಸನ ಅವರು ಹೇಳುವ ಹಾಗೆ ಹೆಣ್ಣು ಸ್ಥಿತ್ಯಂತರದ ಕಾಲಘಟ್ಟದಲ್ಲಿ ನಿಂತಿದ್ದಾಳೆ. ಆದರ ಅವಳು ಮುಂದೆ ಹೆಜ್ಜೆ ಇಟ್ಟಾಗಲೆಲ್ಲ ಅನೇಕ ದುಷ್ಟಶಕ್ತಿಗಳು ಕಾದು ನಿಂತಿವೆ. ಭಾರತ ಇವತ್ತೂ ಎಲ್ಲಾ ರಂಗದಲ್ಲೂ ಗಮನಾರ್ಹವಾದುದನ್ನು ಸಾಧಿಸುತ್ತಿದೆ. ಮಹಿಳೆಯರು ಎಲ್ಲಾ ಕ್ಷೇತ್ರದಲ್ಲೂ ಆತ್ಮವಿಶ್ವಾಸದಿಂದ, ಧೈರ್ಯದಿಂದ ತೊಡಗಿಸಿಕೊಳ್ಳುತ್ತಿದ್ದಾರೆ. ಆದರೆ ಸಮಾಜದಲ್ಲಿ ಅವಳಿನ್ನೂ ಎರಡನೇ ದರ್ಜೆಯ ಪ್ರಜೆಯಾಗಿ ಗೋಚರಿಸುತ್ತಿದ್ದಾಳೆ.

ಇದಕ್ಕೆ 'ಪುರುಷ ಪ್ರಧಾನ ಸಮಾಜ' ಎಂದು ಹೇಳಿದ್ದಾರೆ. ಆದರೂ ಈ ರೀತಿಯ ಸಂಗತಿಗಳೇ ಒಂದು ಸಾಮಾಜಿಕ ವ್ಯವಸ್ಥೆಯಾಗಿ ರೂಪುಗೊಂಡಿದ್ದು; ಅವು ಪುರುಷನ ಪರವಾಗಿವೆ. ಈ ಒತ್ತಡದ ನಡುವೆಯೇ ಅವರ 'ಅರಿವು ಮತ್ತು ಆಲೋಚನೆ' ಕ್ರಮವು ರೂಪುಗೊಳ್ಳುತ್ತವೆ ಎನ್ನುವುದು ನಿಜವಾದರೂ, ಗ್ರಾಮೀಣ ಪ್ರದೇಶದ ಮಹಿಳೆಯರ ಮುಗ್ಧತೆಯ ಸ್ಥಾನದಲ್ಲಿ ಅರೆ ನಾಗರೀಕತೆ ತಲೆ ಹಾಕಿದಾಗ ಅಲ್ಲಿ ಎರಡು ರೀತಿಯ ಪರಿಣಾಮ ಗುರುತಿಸಬಹುದಾಗಿದೆ. ಅತ್ಯಂತ ಕೋಮಲೆಯಾಗಿ ಬಿಡುವ ಒಂದು ವರ್ಗದ ನಾಗರೀಕ ಮಹಿಳೆ ಪ್ರತಿಯೊಂದು ವಿಷಯದಲ್ಲಿಯೂ ಪರಾವಲಂಬಿ, ಪುರುಷಾವಲಂಬಿ, ಒಂದರ್ಥ ಮೈಲಿದೂರ ಒಬ್ಬಳೇ ನಡೆದುಕೊಂಡು ಹೋಗಿ ಸ್ವತಂತ್ರವಾಗಿ ಒಂದು ಕೆಲಸ ಮಾಡಿಕೊಂಡು ಬರಲಾರಳು. ಮನೆಯೊಳಗಿನ ಒಂದು ಮೇಜು, ಕುರ್ಚಿಯನ್ನು ಸರಿಸಲು ಕೂಡ ಅವಳಿಗೆ ಮತ್ತೊಬ್ಬರ

ಸಹಾಯಬೇಕು. ಅಷ್ಟೇ ಏಕೆ? ಒಂದು ಬಾಟಲಿಯ ಮುಚ್ಚಳ ತೆಗೆಯಲು ಸಹಾ ತನ್ನ ಗಂಡ/ಗಂಡುಮಗನ ಸಹಾಯ ಯಾಚಿಸುತ್ತಾಳೆ. ಇದು ಅವಳ ದೌರ್ಬಲ್ಯವನ್ನು ಸೂಚಿಸುತ್ತದೆ. ಏಕೆಂದರೆ ತಾವು ಹೆಣ್ಣಾದುದೇ ಕಾರಣವೆಂದು ನಾರಿಯರೆಲ್ಲ ಭಾವಿಸುತ್ತಾರೆ. ಆಕೆ ಹಾಗಿರುವುದೇ ಸರಿ; ಇಲ್ಲವಾದರೆ ಗಂಡುಬೀರಿಯಾಗಿ ಬಿಡುತ್ತಾಳಷ್ಟೆ ಎಂಬುದು ಪುರುಷ ಭಾವನೆ ಕೂಡ. ಅಂತೆಯೇ ಆಕೆ 'ಪಂಜರದ ಗಿಳಿ'. ಗಂಡಸರೆಂದರೆ ದಿನದ ಇಪ್ಪತ್ತಾಲ್ಕು ಗಂಟೆಯು ತಮ್ಮ ಮೇಲೆ ಅತ್ಯಾಚಾರ ಎಸಗಲು ಹೊಂಚು ಹಾಕಿ ಕುಳಿತಿರುವ ರಣಹದ್ದುಗಳು. ಅವರಿಂದ ಬಚಾವಾಗಲು ಪ್ರತಿ ನಿಮಿಷ ಎಚ್ಚರ ವಹಿಸುವ ಕೋಳಿ – ಪಿಳ್ಳೆಗಳು ತಾವು ಎಂಬುದು ಇವರ ಅನಿಸಿಕೆ. ಸಮೂಹ ಮಾಧ್ಯಮಗಳಲ್ಲಿ ಇಂತಹ ಅಬಲೆಯರ ಚಿತ್ರಣವನ್ನು ಬೇಕಾದಷ್ಟು ನೋಡಬಹುದು. ಇದು ಹೆಣ್ಣು ತನ್ನ ಬಗ್ಗೆ ಇರುವ ಕೀಳರಿಮೆ ಭಾವನೆಯನ್ನು, ಸೋಮಾರಿತನವನ್ನು, ವ್ಯಕ್ತಪಡಿಸುವುದಾಗಿದೆ. ಆರೋಗ್ಯಕರವಾಗಿ ಆಲೋಚಿಸಿದಾಗ ಕಲ್ಲು ಹೃದಯಲ್ಲೂ ಪ್ರೀತಿ ಅಂಕುರಿಸುವ, ಸಾಮರಸ್ಯ ಉಂಟು ಮಾಡುವ ಸಹನಶೀಲತೆಯು ನಂಬಿಕೆ ಹೊಂದಾಣಿಕೆಯಲ್ಲಿ ಮರುಕಳಿಸಬಹುದು. "ಅಶಿಕ್ಷಿತಳು, ಮುಗ್ಧಳು, ಬಡವಳು ಆದ ಬುಡಕಟ್ಟು ಮಹಿಳೆ ದುಡಿದರೂ ಅವಳು ಎರಡನೇ ದರ್ಜೆಯ ಪ್ರಜೆ ಮಾತ್ರ" ಎಂಬುದು ಬಿ.ಟಿ. ಲಲಿತಾನಾಯಕ್‌ರವರ ಹೇಳಿಕೆಯಾಗಿದೆ.

ಈ ಹೇಳಿಕೆ ಯಾವುದೇ ಒಂದು ಜನಸಮುದಾಯದಲ್ಲಿ ಗಂಡು – ಹೆಣ್ಣು ಇರುವುದು ಮತ್ತು ಅವರ ಸಂಸ್ಕೃತಿಯ ರಚನೆಯಲ್ಲಿ ಅವರ ಪಾಲ್ಗೊಳ್ಳುವಿಕೆ ಸಹಜವಾದುದು. ಆದರೆ ನಮ್ಮ ಪುರುಷ ಕೇಂದ್ರಿತ ಸಮಾಜದ ಇತಿಹಾಸ, ಆರ್ಥಿಕ ರಾಜಕೀಯ, ಪರಿಕಲ್ಪನೆಗಳು ಹೆಣ್ಣಿನ ಅಸ್ಮಿತೆಯನ್ನು ದಾಖಲಿಸದೆ ಹೋಗಿವೆ. ಗಂಡಿನ ಕಾರ್ಯಚಟುವಟಿಕೆ ಅವರ ಅನುಭಾವ ಮತ್ತು ಅವಲೋಕನಗಳು ಇಂತಹ ಅಧ್ಯಯನದಲ್ಲಿ ತುಂಬಿಕೊಂಡಿವೆ. ಪುರುಷರು ಕ್ರಿಯಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾಗ ಸ್ತ್ರೀಯರ ಪಾತ್ರ ಮತ್ತು ಕಾರ್ಯ ಏನಿತ್ತು? ಅವಳ ಬದುಕಿನ ಅನುಭಾವಗಳೇನು? ಅವಳ ಲೋಕ ದೃಷ್ಟಿ ಏನಿತ್ತು? ಎನ್ನುವ ಪ್ರಶ್ನೆಗಳಿಗೆ ಈ ಅಧ್ಯಯನಗಳು ಮೌನ ತಾಳುತ್ತವೆ. ಆದರೆ ಹೆಣ್ಣಿಗೆ ಚರಿತ್ರೆ ಪರಂಪರೆ ಇರಲಿಲ್ಲ ಎಂದಲ್ಲ. ಪುರುಷ ರಾಜಕಾರಣ ಅವುಗಳನ್ನು ಮೂಲೆಗೆ ತಳ್ಳಿವೆ. ಹೀಗಾಗಿ ಹೆಣ್ಣಿಗೆ ಸಂಸ್ಕೃತಿಯೊಂದಿಗೆ, ನಮಗೆ ತೋರಿಸುವುದಕ್ಕಿಂತ ಹೆಚ್ಚಿನ ಸಂಬಂಧವಿದೆ.

ರೂಪ ಹಾಸನರವರು ಹೇಳುವಂತೆ "ಸಮಾಜದಲ್ಲಿ ಪುರುಷನೊಬ್ಬ ಹೆಣ್ಣಿಗಿಂತ ಉನ್ನತ ಸ್ಥಾನ ಪಡೆಯುವುದು, ಅವನಿಗಿರುವ ಪರಿಸರ ಪ್ರೋತ್ಸಾಹದಿಂದ ಮಹಿಳೆಗೂ ಇಂಥದೆ ವಾತಾವರಣ ಸಿಕ್ಕರೆ ಅವಳು ಸಬಲಳಾಗಿ, ಸಶಕ್ತಳಾಗಿ ಬೆಳೆಯಬಹುದು. ಮಹಿಳೆಯ ಬಗೆಗಿನ ಸಮಾಜದ ಒಟ್ಟಾರೆ ಗ್ರಹಿಕೆ, ಮನೋಭಾವ ಬದಲಾಗಬೇಕಿದೆ". ಮಹಿಳೆ ತನ್ನ ಸಹಜೀವಿ, ಅವಳಿಗೂ ತನ್ನಂತೆ ಸಮಾನ ಹಕ್ಕಿದೆ ಎಂದು ಪುರುಷರು ಭಾವಿಸುವ ಸಾಮಾಜಿಕ ವ್ಯವಸ್ಥೆ ಇನ್ನೂ ಬರಬೇಕಿದೆ. ಇಂತಹ ಮನೋಭಾವವನ್ನು ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ ರೂಪಿಸುವುದು ಮುಖ್ಯವಾಗಿದೆ. ಸ್ತ್ರೀ ಪುರುಷರಿಬ್ಬರಿಗೂ ಸಮಾನತೆ, ಸ್ವಾತಂತ್ರ್ಯವನ್ನು ಮತ್ತು ಶಿಕ್ಷಣವನ್ನು ಒದಗಿಸಬಹುದಾಗಿದೆ ಎಂದಿದ್ದಾರೆ ಹಾಗೂ ಗ್ರಾಮೀಣ ಪ್ರದೇಶದ

ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಪ್ರಮಾಣ ಕಡಿಮೆ ಇರುವುದಕ್ಕೆ ಪುರುಷ ಸಮಾಜವೇ ಕಾರಣವಾಗಿದೆ. ಹೇಗೆಂದರೆ ಅವಳಿಗೆ ಕಟ್ಟುಪಾಡುಗಳನ್ನು ಹಾಕಿ ಬಂಧಿಸುತ್ತಾರೆ. ಭಾರತೀಯ ಸಮಾಜದಲ್ಲಿ ಬೆಳೆದ 'ಹೆಣ್ಣು ಮಕ್ಕಳ ಶೀಲದ ಪರಿಕಲ್ಪನೆ' ಅವರು ಮುಕ್ತರಾಗಿ ಸಮಾಜದಲ್ಲಿ ಜೀವಿಸಿದಂತೆ ಒಂದು ಚೌಕಟ್ಟನ್ನು ಹಾಕಿಬಿಟ್ಟಿದೆ.

ಇಲ್ಲಿ ಅವರು ಗಂಡು ಹೆಣ್ಣಿನ ಸಮಾನತೆಯ ಬಗ್ಗೆ, ಸಾಮರಸ್ಯದ ಬಗ್ಗೆ, ಅವಳ ಅಂತಃಕರಣದ ಮುಂದಿನ ಭವಿಷ್ಯದ ಬಗ್ಗೆ, ಸಾಮಾಜಿಕ ಕಳಕಳಿಯನ್ನು ಆಶಾದಾಯಕವಾಗಿ ವ್ಯಕ್ತಪಡಿಸುತ್ತಾರೆ. ಇದು ಔಚಿತ್ಯಪೂರ್ಣವಾಗಿದೆ. ಇಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ಬಯಸುವುದಾಗಿದೆ. ಸಂಪ್ರದಾಯದ ಮೂಢನಂಬಿಕೆಗಳನ್ನು ಮೆಟ್ಟಿನಿಲ್ಲುವಂತಾಗಿದೆ ಹಾಗೂ ಭರವಸೆಯನ್ನೂ ಚೈತನ್ಯವನ್ನೂ ಮೂಡಿಸುವುದಾಗಿದೆ.

ಈ ನಿಟ್ಟಿನಲ್ಲಿ ಸ್ತ್ರೀವಾದಿ ಚಿಂತನೆ ಮೊದಲನೆಯದಾಗಿ 'ಸ್ತ್ರೀ ಪುರುಷರ ನಡುವಿನ ಅಸಮಾನತೆ ಪ್ರಕೃತಿ ಸಹಜವಲ್ಲ; ಜೈವಿಕವಲ್ಲ. ಅದು ಸಾಂಸ್ಕೃತಿಕ ಹಿನ್ನೆಲೆಯಾಗಿದ್ದು, ಪರಿಸರದ ಕಾರಣದಲ್ಲಿ ಉದ್ಭವಿಸಿದ್ದು' ಎಂದು ನಂಬುತ್ತದೆ. ಎರಡನೆಯದಾಗಿ ಪುರುಷರ ದೃಷ್ಟಿಕೋನ ಸಾರ್ವತ್ರಿಕವಲ್ಲ. ಪುರುಷ ಪ್ರಧಾನ ಮೌಲ್ಯವ್ಯವಸ್ಥೆ ಪ್ರಧಾನ ಸಂಸ್ಕೃತಿಗೆ ಅನುಕೂಲಕರವಾದ ಅರ್ಧಸತ್ಯವನ್ನಷ್ಟೇ ಹೇಳುತ್ತದೆ. ಹೆಣ್ಣುತನದ ಗುಣಸ್ವಭಾವಗಳು ದೈಹಿಕವಾಗಿ ಹೆಣ್ಣಾದ ಮಾತ್ರಕ್ಕೆ ಒಳಗೊಂಡಿರುತ್ತವೆ ಎಂಬ ಮೂಲನಂಬಿಕೆಯನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಹೆಣ್ಣುತನ ಸಮಾಜ – ಸಂಪ್ರದಾಯ – ಸಂಸ್ಕೃತಿಗಳು ಪುರುಷಲಾಭವಾಗಿ ಮಹಿಳೆಯರ ಮೇಲೆ ಹೇರಿದ ಗುಣಗಳಾಗಿವೆ.

ತಾಯ್ತನ, ಶೀಲ, ಪಾತಿವ್ರತ್ಯ ಎಲ್ಲವೂ ಸಮಾಜದ ನಿರೀಕ್ಷೆಯೇ ಹೊರತು ಹೆಣ್ಣಿಗೆ ವರ್ಣತಂತುಗಳಿಂದ ಹರಿದು ಬರುವುದಿಲ್ಲ. ಪ್ರತಿವ್ಯಕ್ತಿಯಲ್ಲೂ ಹೆಣ್ಣು – ಗಂಡು ಗುಣಗಳಿವೆ. ಆದರೆ ಸಮಾಜ ಗಂಡಿನಲ್ಲಿ ಗಂಡು ಗುಣಗಳನ್ನಷ್ಟೇ ಪೋಷಿಸಿ, ಹೆಣ್ಣಿನಲ್ಲಿ ಹೆಣ್ಣು ಗುಣಗಳನ್ನು ಪ್ರೋತ್ಸಾಹಿಸುತ್ತದೆ. ಸಾಲದ್ದಕ್ಕೆ ಈ ವಿಂಗಡಣೆ ಗಂಡುಗುಣಗಳು ಹೆಚ್ಚಿನದೆಂದುಸಾರಿ, ಹೆಣ್ಣುಗುಣಗಳನ್ನೇ ದೌರ್ಬಲ್ಯವಾಗಿಸಿವೆ. ಪ್ರತಿ ಲಿಂಗದೊಡನೆ ಜೋಡಿಸಿದ ಗುಣ ವಿಶೇಷಣಗಳು ಆ ಲಿಂಗದ ಆಯಾಮಗಳನ್ನು ಸೀಮಿತಗೊಳಿಸಿ ಗಂಡಿನ ಸಾಮ್ಯವನ್ನು ಅದುಮಿಟ್ಟು ಬದುಕಿನ ಸಾಧ್ಯತೆಗಳನ್ನು ಬದಿಗಿಟ್ಟಿವೆ. ಇತಿಹಾಸದುದ್ದಕ್ಕೂ ಪುರುಷ ಪ್ರಪಂಚದ ಅನುಭವಗಳು ಸಾರ್ವತ್ರಿಕವೆಂಬಂತೆ ಅಭಿವ್ಯಕ್ತಗೊಂಡು ಸ್ತ್ರೀಯ ಅನಿಸಿಕೆ, ಅನುಭವ, ಸಾಧನೆ ದಾಖಲಾಗಿವೆ. ಏಕುಮುಖ ಚರಿತ್ರೆ ನಮ್ಮದಾಗಿದೆ. ಹೆಣ್ಣುಗುಣ, ಗಂಡುಗುಣ ಎಂಬ ಪದ ಪ್ರಯೋಗಕ್ಕೆ ಒಂದು ಸ್ಪಷ್ಟನೆ. ಇವು ನಮ್ಮ ಸಮಾಜ ಸಂಸ್ಕೃತಿ ಹೆಣ್ಣಿನಲ್ಲಿ, ಗಂಡಿನಲ್ಲಿ ಇರುವ, ಇರಬೇಕೆಂದು ಭಾವಿಸಿದ ಗುಣಗಳು ಇದನ್ನು ಜೈವಿಕಗಳಲ್ಲಿ ಪ್ರಕೃತಿ ಸಹಜವಾಗಿ ಒಪ್ಪುತ್ತಿಲ್ಲ.

ರೂಪ ಹಾಸನರವರ ಸಾಹಿತ್ಯದಲ್ಲಿ ಮಹಿಳೆ ಬಗೆಗಿನ ಆಲೋಚನೆಗಳು, ಗಂಡು ಹೆಣ್ಣಿನ ವರ್ಗೀಕರಣಕ್ಕೆ ಜೈವಿಕ ಭಿನ್ನತೆಗಳು ಮೂಲಾಧಾರಗಳಾಗಿವೆ ಹಾಗೂ ಇಬ್ಬರಿಗೂ ಅವರದೆಯಾದ ಜವಾಬ್ದಾರಿಗಳಿರುತ್ತವೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅವುಗಳನ್ನು ಹಿಗ್ಗಿಸಲಾಗಿದೆ. ಶ್ರೇಷ್ಠತೆ – ಕನಿಷ್ಠತೆ ಎಂಬ ಶ್ರೇಣೀಕರಣವನ್ನು ಸಮಾಜ ಮಾಡಿದೆ. ತಾರತಮ್ಯದ ಧೋರಣೆಗಳಿವೆ. ಲಿಂಗತ್ವದ ರಾಜಕಾರಣವು ಅವರಲ್ಲಿರುವ ಭಿನ್ನತೆಯನ್ನು ಎತ್ತಿ ತೋರಿಸಿ, ಅವರಲ್ಲಿರುವ ಸಾಮ್ಯತೆಯನ್ನು ಉದ್ದೇಶ ಪೂರ್ವಕವಾಗಿ ಮರೆಮಾಚಿದೆ ಎಂದಿದ್ದಾರೆ.

ಈ ನಿಟ್ಟಿನಲ್ಲಿ ಆಲೋಚಿಸಿದಾಗ ಸ್ತ್ರೀವಾದ ಮಾನವತಾವಾದಕ್ಕಿಂತ ಭಿನ್ನವಲ್ಲ. ಹುಟ್ಟಿನಿಂದಲೇ ಒಂದು ಗುಂಪು ಇನ್ನೊಂದು ಗುಂಪಿಗಿಂತ ಶ್ರೇಷ್ಠ ಎಂಬ ಮೂಲ ಶ್ರೇಣೀಕೃತ ವ್ಯವಸ್ಥೆಯನ್ನೇ ಸ್ತ್ರೀವಾದ ತಿರಸ್ಕರಿಸುತ್ತದೆ. ಅದು "ಬ್ರಾಹ್ಮಣನು ಶೂದ್ರನಿಗಿಂತ ಶ್ರೇಷ್ಠ ಭಾವನೆ ಆಗಬಹುದು. ಬಿಳಿಯ ಕರಿಯನಿಗಿಂತ ಉತ್ತಮ, ಗಂಡು ಹೆಣ್ಣಿಗಿಂತ ಮೇಲು ಎಂಬ ಭಾವನೆಯೂ ಆಗಬಹುದು. ಆದರೆ ಜಾತಿವಾದ, ಜನಾಂಗವಾದ, ವರ್ಗವಾದಗಳಂತೆ ಶೋಷಕರ, ಶೋಷಿತರ, ಸ್ಪಷ್ಟ ವಿಭಾಗವನ್ನು ಸ್ತ್ರೀವಾದದಲ್ಲಿ ಗುರುತಿಸಲು ಸಾಧ್ಯವಿಲ್ಲ. ಈ ಶೋಷಣೆ ಅತಿ ಸೂಕ್ಷ್ಮ ಹಂತದಲ್ಲಿ 'ತ್ಯಾಗ, ಶೀಲ, ಸತಿ, ಮಾತೆ, ದೇವಿ' ಎಂಬ ಸುಂದರ ಪದಗಳ ಅಡಿಯಲ್ಲಿಯೇ ನಮ್ಮೊಡನೆ ಸ್ನೇಹ – ಪ್ರೀತಿ – ದಾಂಪತ್ಯ ಇಂತಹ ಹತ್ತು ಹಲವು ಸಂಬಂಧಗಳಲ್ಲಿ ಸಂಕೀರ್ಣವಾಗಿ ಬೇರೆ ಭಾವಗಳಿಂದಲೇ ಅತಿ ಸೂಕ್ಷ್ಮವಾಗಿ ನೆನೆಯುವಂತದು"[೬] ಎಂಬುದು ನೇಮಿಚಂದ್ರರವರ ನಿಲುವಾಗಿದೆ. ಹಾಗೆಂದರೆ ಇವನ್ನು ಬರಹದಲ್ಲಿ ಹಿಡಿದಿಡುವುದು ಸುಲಭವಲ್ಲ.

ರೂಪ ಹಾಸನರವರ ಸಾಹಿತ್ಯದಲ್ಲಿ ಹಲವು ಬುದ್ಧಿಜೀವಿಗಳ ಅಡುಗೆಮನೆ ಸಾಹಿತ್ಯವೆಂದು ಎಲ್ಲಾ ಮಹಿಳಾ ಸಾಹಿತ್ಯದವರ ಜೊತೆಯಲ್ಲಿಯೇ ಲೇವಡಿ ಟೀಕೆಗಳುಂಟು. ಅದಕ್ಕೆ ಪ್ರತಿಯಾಗಿ ಈ ಕವಿತೆಯಿಂದ ಉತ್ತರವನ್ನು ನೀಡುತ್ತಾರೆ.

"ವ್ಯಕ್ತವಾದರೂ ಅನಾಥವಾಗಿ
ಉಪ್ಪು ಹುಳಿಕಾರಗಳ
ಹದಬೆರೆತ ಖಾದ್ಯವೆಂದು
ಎದೆತಟ್ಟಿ ಹೇಳಲಾಗದ
ಅಲ್ಲಿಷ್ಟು ಇಲ್ಲಿಷ್ಟು ಭಾವೋನ್ಮಾದ
ಹರಿದು ಬಿದ್ದು
ಕಲಸುಮೇಲೋಗರವಾದ ಇದು
ಹೌದು ಗೆಳೆಯ
ಅಡುಗೆ ಮನೆ ಸೇರಿದ ಮನದ ಸಾಹಿತ್ಯವೆ!"[೭] (ಅಡುಗೆ ಮನೆ ಸಾಹಿತ್ಯ)

ರೂಪ ಹಾಸನ ಅವರ ಪ್ರಥಮ ಕವನಸಂಕಲನವಾದ 'ಒಂದಿಷ್ಟು ಹಸಿಮಣ್ಣು' ಸಂಕಲನದ 'ಅಡುಗೆ ಮನೆ ಸಾಹಿತ್ಯ' ಕವಿತೆಯು ಮನದ ಸಾಹಿತ್ಯವಾಗಿ ಕಂಡುಬಂದಿದೆ. ಅಡುಗೆ ಮನೆಯ ಪರಿಕರಗಳನ್ನು ರೂಪಕವಾಗಿಸುವ ಸೃಜನಶೀಲತೆಯ ಸೃಷ್ಟಿಕ್ರಿಯೆ ಮನಕೆ ಇಟ್ಟ ಕೈಗನ್ನಡಿಯಂತೆ ಉದ್ದೀಪನಗೊಳಿಸುತ್ತದೆ. ಭಾವೋನ್ಮಾದ ಉತ್ಕಟತೆಯ ಬದುಕಿನ ಸಂಕೀರ್ಣತೆಯನ್ನು ಹದಗೊಳಿಸುವ ಪ್ರಕ್ರಿಯೆ. ಇದು ಔಚಿತ್ಯಪೂರ್ಣವಾಗಿದ್ದುದು. ಆದರೆ ಮಹಿಳಾವಾದಿಗಳು ರಚಿಸಿರುವ ಸಾಹಿತ್ಯವನ್ನು ವಿಮರ್ಶಕರು ಹೆಣ್ಣುತನದ ಒಟ್ಟು ನಿಲುವನ್ನು ಅಲಕ್ಷದಿಂದ ನೋಡುವ ಕ್ರಮವೆಂದು ಭಾವಿಸುತ್ತಾರೆ. ಕನ್ನಡದ ಸಂದರ್ಭದಲ್ಲಿ ನಮ್ಮ ಕೆಲವು ವಿಮರ್ಶಕರು ಮಹಿಳಾವಾದಿ ಸಾಹಿತ್ಯವನ್ನು 'ಅಡುಗೆ ಮನೆ ಸಾಹಿತ್ಯ' ಎಂದು ದೂರಿಕರಿಸಿ ನೋಡಿರುವುದನ್ನು ಇಲ್ಲಿ ನೆನೆಯಬಹುದು. ಆದರೆ 'ಮಹಿಳಾವಾದಿಗಳ' ಕೃತಿಯಲ್ಲಿ ಕಲಾತ್ಮಕ ಗುಣವನ್ನು ಗಮನಿಸುವ ದೃಷ್ಟಿಕೋನವೇ ಪುರುಷನಿಷ್ಠವಾದದ್ದರಿಂದ ಇದನ್ನು ಮಹಿಳಾವಾದಿಯ ತಿಳುವಳಿಕೆಯ ಹಿನ್ನೆಲೆಯಲ್ಲಿ ವಿರೋಧಿಸುತ್ತಾರೆ. 'ಅಡುಗೆ ಮನೆ ಸಾಹಿತ್ಯ' ಎಂಬ ಕವಿತೆಯನ್ನು ಬರೆಯುವ ಮುಖೇನ ಇಡೀ ಶತಮಾನದ ಸ್ತ್ರೀವಾದಿ ಸಾಹಿತ್ಯಕ್ಕೆ ಹೊಸ ಭಾಷ್ಯವನ್ನು ಕೊಡುವ ರೀತಿಯಲ್ಲಿ ಸ್ತ್ರೀ ಸಂವೇದನೆಗಳಿಗೆ ಒಂದು ವಿಶಾಲ ಮನೋಭೂಮಿಕೆಯಲ್ಲಿ ವ್ಯಾಖ್ಯಾನ ಬರೆಯುವಂತೆ ರೂಪಹಾಸನ ಅವರ ಈ ಕವಿತೆ ಕಳೆಗಟ್ಟಿದೆ ಎನ್ನುವುದು ವಿಮರ್ಶಕರ ಅಭಿಮತವಾಗಿದೆ.

ರೂಪ ಅವರ ಮೂರು ಸಂಕಲನಗಳ (ಗಳಿಗೆ ಬಟ್ಟಲ ತಿರುವುಗಳಲ್ಲಿ ಹೊರತುಪಡಿಸಿ) ೧೨೮ ಕವಿತೆಗಳಲ್ಲಿ ಬಹುತೇಕವಾಗಿ ಸ್ತ್ರೀ ಅಸ್ಮಿತೆಯನ್ನು, ಆಕೆಯ ಬದುಕಿನ ಆಳ – ಅಗಲಗಳನ್ನು, ಜೀವನದ ಅನನ್ಯತೆಯನ್ನು ಸೆರೆಹಿಡಿಯಲಾಗಿದೆ. ಅದರೊಟ್ಟಿಗೆ ಸಾಮಾಜಿಕ ಕಳಕಳಿ, ಸಾಂಸ್ಕೃತಿಕ, ಭವ್ಯತೆ ಹಾಗೂ ಜೀವನ ಮೌಲ್ಯಗಳತ್ತ ಇಲ್ಲಿನ ಅನೇಕ ಕವಿತೆಗಳು ತುಡಿಯುತ್ತವೆ. ಬೆಳಗೆರೆ ಜಾನಕಮ್ಮ ಅವರು ಹೇಳಿರುವ "ಗಿಡವೆಂದು ತಿಳಿದೆಯೋ/ಹೆಣ್ಣು ಜನ್ಮದ ಒಡಲ ಫಲಗಳನು ಮನಬಂದಂತೆ/ಸೃಜಿಸುವುದಕೆ/"[೮] ಎಂಬ ಹಿನ್ನೆಲೆಯಲ್ಲಿ ಇಲ್ಲಿನ ಅನೇಕ ಪದ್ಯಗಳ ಸಾಲುಗಳು ಪುರುಷನ ಮನಸ್ಸನ್ನು ಸೌಮ್ಯವಾಗಿಯೇ ಚುಚ್ಚುತ್ತವೆ. ಅವನ ಹೃದಯವನ್ನು ತಿಣುಕುತ್ತವೆ. ಪುರುಷ ಪರವಾದ ಸ್ಥಾಪಿತ ಮೌಲ್ಯಗಳನ್ನು ದೇವರು ಮತ್ತು ಧರ್ಮದ ಹೆಸರಿನಲ್ಲಿ ಕಟ್ಟಿಕೊಂಡಿರುವ ಡಂಬಾಚಾರಗಳನ್ನು ಪ್ರಶ್ನಿಸುತ್ತವೆ.

ಕನ್ನಡಿಯೂ 'ಹಾಡೂ ಮತ್ತು ಹುಡುಗಿಯೂ' ಎಂಬ ಕವಿತೆಯು ಹೆಣ್ಣಿನ ಮನದಾಳದ ಭವಣೆಗಳನ್ನು ಅತ್ಯಂತ ಸಮರ್ಥವಾಗಿ ಕಟ್ಟಿಕೊಡುತ್ತದೆ. ಈವರೆಗೆ ಕನ್ನಡಿಯನ್ನು ಪ್ರೀತಿಸಿದ ಹೆಣ್ಣಿಗೆ ಕೇವಲ ಅವಳ ಪ್ರತಿಫಲ ಮಾತ್ರ ಲಭ್ಯವಾಗುತ್ತದೆ. "ಎಲ್ಲಾ ಅವ್ಯಕ್ತ ಭಾವಗಳು ದಕ್ಕುವುದಾದರೂ ಹೇಗೆ? ಎಂಬುದಾಗಿ ಪ್ರಶ್ನಿಸಲಾಗಿದೆ. ಇಲ್ಲಿ ಹೆಣ್ಣಾದವಳು ಪುರುಷನ ಸಾಂಗತ್ಯವನ್ನು ಎಷ್ಟೇ ಆತ್ಮೀಯವಾಗಿ ಬೆಳಸಿಕೊಂಡರೂ ಅವನು ಮಾತ್ರ ಅವಳಲ್ಲಿ ಆಲಿಂಗನವಾಗಲಿಲ್ಲ. ಗಂಡಸಿನ ಆಲಿಂಗನ ಕೇವಲ ಕನ್ನಡಿಯ ಪ್ರತಿಫಲದಂತೆ ಎಂಬುದು ಕವನದ ಸಾಲುಗಳು ಒಳಗೊಂಡಿರುವ ತಾತ್ಪರ್ಯವಾಗಿದೆ. ಆದರೂ

ಕನ್ನಡಿಯನ್ನು ಪ್ರೀತಿಸುತ್ತಲೇ, ಭರವಸೆಯಿಂದ ನಾಳೆಯ ಬದುಕಿನ ಕನಸ್ಸುಗಳನ್ನು ಕಟ್ಟಿಕೊಳ್ಳುವುದು ಇಲ್ಲಿನ ಮುಖ್ಯ ಮನೋಧೋರಣೆಯಾಗಿದೆ. 'ಕಣ್ಕಾಪು ಬಿಗಿದ ಕುದುರೆ' ಎಂಬ ಕವಿತೆಯಲ್ಲಿ ಪುರುಷ ಪ್ರಧಾನ ಸಮಾಜವು ಮಹಿಳೆಗೆ ಹಾಕಿಕೊಟ್ಟಿರುವ ಚೌಕಟ್ಟನ್ನು ನಿರೂಪಿಸುತ್ತಲೇ, ಆ ಕಟ್ಟಲೆಯನ್ನು ಮೀರುವ, ಗೆರೆಯನ್ನು ದಾಟುವ, ಹೆಣ್ಣಿನ ಉತ್ಕಟವಾದ ಇಚ್ಛೆಯನ್ನು ಪ್ರತಿಬಿಂಬಿಸಲಾಗಿದೆ. ಇಲ್ಲಿ ಕುದುರೆಯೇರಿ ಕುಳಿತಿರುವ ಹೆಣ್ಣಿಗೆ ದಾರಿಯ ಬಗ್ಗೆ ಯಾವುದೇ ಗೊಡವೆ ಇಲ್ಲ. ದಾರಿ ಯಾವುದಾದರೂ ಸರಿಯೇ ಗುರಿ ತಲುಪುವ ಛಲ ಅವಳದಾಗಿದೆ. ಇದಕ್ಕೆ ಉದಾಹರಣೆಯಾಗಿ ಪದ್ಯದ ಕೆಲವು ಸಾಲುಗಳನ್ನು ನೋಡಬಹುದು.

"ಉದ್ದಾನು ಉದ್ದ ಕಣ್ಣು ಹಾಯ್ದಷ್ಟು ದೂರ
ದಾರಿ ಮಲಗಿದೆ ಹೀಗೆ . . . . . ನೇರ
ಏರುಪೇರಿಲ್ಲ, ಅಡೆತಡೆಗಳೂ ಇಲ್ಲ
ಚೌಕಟ್ಟು ಮೀರಿ ನೋಡುವಂತಿಲ್ಲ
ತನ್ನ ಸರಧಿಯೊಳಗೆ ಕಂಡದ್ದೇ ಸತ್ಯ
ಮಿಕ್ಕಿದ್ದೆಲ್ಲವೂ ಮಿಥ್ಯ!"[೯] (ಕಣ್ಕಾಪು ಬಿಗಿದ ಕುದುರೆ)

'ನೀ ಬರಿಯ ನೀರಲ್ಲ' ಎಂಬ ಕವಿತೆಯು ಸ್ತ್ರೀ ಅನನ್ಯತೆಯನ್ನು, ಆಕೆಯ ಅಂತರಾಳದ ಅಸ್ಮಿತೆಯನ್ನು ನಿಚ್ಚಳವಾಗಿ ಕಟ್ಟಿಕೊಡುತ್ತದೆ. ಇಲ್ಲಿ 'ನೀರು' ಎನ್ನುವುದು ಸಂಕೇತವಾಗಿದ್ದು ಮಹಿಳೆಯ ಅಪ್ರತಿಮವಾದ ಶಕ್ತಿ –ಸಾಮರ್ಥ್ಯಗಳನ್ನು ಧ್ವನಿಸುತ್ತದೆ. ಈ ಬಗೆಯ ನೀರನ್ನು ಯಾರೇ ಬಂದರೂ ತಡೆದು ನಿಲ್ಲಿಸಲು ಸಾಧ್ಯವಿಲ್ಲ. ಅದನ್ನು ಕಟ್ಟುಪಾಡುಗಳೆಂಬ ಬೋಗುಣಿಯಲ್ಲಿ ಹಿಡಿದಿಡಲು ಅಸಾಧ್ಯವಾಗಿದೆ. ಹಾಗೆ ಮಾಡಲು ಹೊರಟರೆ ಕೂಡಲೇ ಘನೀಭವಿಸಿ, ತನ್ನೊಳಗಿನ ಅದಮ್ಯ ಶಕ್ತಿಯನ್ನು ನಿರೂಪಿಸುತ್ತದೆ. ಈ ಅರ್ಥ ಪ್ರಪಂಚವನ್ನು ಕವಿತೆಯ ಈ ಸಾಲುಗಳು ಅತ್ಯಂತ ಪರಿಣಾಮಕಾರಿಯಾಗಿ, ಮನಮುಟ್ಟುವಂತೆ, ಹೃದಯ ತಟ್ಟುವಂತೆ, ಪುರುಷ ಕೇಂದ್ರಿತ ಸಮಾಜ ಎಚ್ಚರಗೊಳ್ಳುವಂತೆ ಧ್ವನಿಸುತ್ತದೆ.

"ಹೇ ತಾಯೆ,
ನೀ ಬರಿಯ ನೀರಲ್ಲ
ನೀರೆಂಬ ಮಾಯೆ!
ಹನಿಹನಿಯ
ಬೊಗಸೆ ಬೊಗಸೆ
ಹೀರಿದರೂ ಹಿಂಗಿತೇ ದಾಹ?
ಮತ್ತೆ ಮತ್ತೆ ಬೇಕೆನಿಸುವ
ತೀರದಾ ಮೋಹ!"[೧೦] (ನೀ ಬರಿಯ ನೀರಲ್ಲ!)

ರೂಪ ಅವರ ಅನುಭವದ ನೆಲೆಯಿಂದ ಪಡಿಮೂಡಿರುವ 'ಸಮಾಧಾನ' ಕವಿತೆಯಲ್ಲಿ ಪುರುಷ ನಿರ್ಮಿತ ವ್ಯವಸ್ಥೆಯ ಕ್ರೌರ್ಯಕ್ಕೆ ನಲುಗಿ ಹೋಗುತ್ತಿರುವ ಹೆಣ್ಣಿನ ಚಿಂತಾಜನಕ ಸ್ಥಿತಿಯನ್ನು ಚಿತ್ರಿಸಲಾಗಿದೆ. ಅಲ್ಲದೆ, ಅಡುಗೆ ಮನೆಯ ಘಾಟಿನಲ್ಲಿ, ದೇವರ ಮನೆಯ ಉಸಿರುಗಟ್ಟಿಸುವ ವಾತಾವರಣದಲ್ಲಿ, ಆಧುನಿಕ ಸೌಲಭ್ಯಗಳನ್ನು ಅನುಭವಿಸುವ ಭರಾಟೆಯಲ್ಲಿ ಕಳೆದು ಹೋಗುತ್ತಿರುವ ಹೆಣ್ಣಿನ ಅನನ್ಯತೆಯನ್ನು ಪದ್ಯವು ಅತ್ಯಂತ ಸಮರ್ಥವಾಗಿ ಪ್ರಕಟಿಸುತ್ತದೆ. ಆದರೂ ಕವಿಯ ಕೂಗಿಗೆ ಅವಳ ನರಕಸದೃಶವಾದ ಧ್ವನಿ ಕೇಳಿಸಿದಾಗ ಕವಿ ಸಮಾಧಾನ ಪಟ್ಟುಕೊಳ್ಳುತ್ತಾರೆ. ಕೊನೆಯದಾಗಿ ಕವಿತೆಯು "ಹೆಣ್ಣಿಗೆ ಒಂದಲ್ಲ ಒಂದು ದಿನ ಬಿಡುಗಡೆಯ ಭಾಗ್ಯ ದೊರೆಯುತ್ತದೆ" ಎಂಬ ಸಮಾಧಾನದೊಂದಿಗೆ 'ಸಮಾಧಾನ' ಕವನವು ಪೂರ್ಣಗೊಳ್ಳುತ್ತದೆ/ಮೇಲಿನ ಅರ್ಥವಿವರಣೆಯನ್ನು ಕವನದ ಈ ಸಾಲುಗಳು ಅತ್ಯಂತ ಅರ್ಥಪೂರ್ಣವಾಗಿ ಬೆಂಬಲಿಸುತ್ತವೆ.

"ಅಡುಗೆ ಮನೆಯ ಕತ್ತಲಲ್ಲೋ
ದೇವರು ಮನೆಯ
ಉಸಿರು ಕಟ್ಟಿಸುವ ಮೌನದಲ್ಲೋ
ಬಹುಶಃ ಕೊಲೆಯಾಗಿದ್ದಾಳೆ
ನನ್ನ ಹುಡುಗಿ!
ಎಂದುಕೊಳ್ಳುತ್ತಾ,
ದನಿ ಎತ್ತರಿಸಿ ಕೂಗಿದರೊಮ್ಮೊಮ್ಮೆ
ನರಳುವ, ಮುಲುಗುಟ್ಟುವ
ಸದ್ದಿನಡಿಯಿಂದ
"ಹೂಂ" ಗುಟ್ಟುತ್ತಾಳೆ"[೧೧] (ಸಮಾಧಾನ)

'ಒಂದಿಷ್ಟು ಹಸಿಮಣ್ಣು' ಕವಿತೆಯು ರೂಪ ಹಾಸನರವರ ಪ್ರಥಮ ಕವನ ಸಂಕಲನದ ಶಿರೋನಾಮೆಯ ಕವಿತೆಯಾಗಿದ್ದು, ಕವಿಯತ್ರಿಯವರಿಗೆ ಬಹುಜನಪ್ರಿಯತೆಯನ್ನು ತಂದುಕೊಟ್ಟ, ತೀರಾ ಸಂವೇದನಾಶೀಲವಾದ ಪದ್ಯವಾಗಿದೆ. ಇಲ್ಲಿ ಹೆಣ್ಣಿನ ಹಂಬಲವನ್ನು, ತುಡಿತ – ಮಿಡಿತಗಳನ್ನು, ಬದುಕು ಕಟ್ಟಿಕೊಳ್ಳಲು ಇರುವ ಆಕಾಂಕ್ಷೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಪ್ರಕಟಿಸಲಾಗಿದೆ. ಇಲ್ಲಿ ಪುರುಷನನ್ನು ಕವಿಯತ್ರಿಯವರು 'ಗೆಳೆಯ' ಎಂದು ಸಂಬೋಧಿಸುತ್ತಲೇ ಅವನು ಆಕೆಯ ಮೇಲೆ ಎಸಗಿರುವ ಕ್ರೌರ್ಯವನ್ನು ಕಂಡರಿಸುತ್ತಾರೆ. 'ರೆಕ್ಕೆ ಕತ್ತರಿಸಿದರೂ ಕೈಕಾಲು ಮುರಿದರೂ ನಾ ನಿಲ್ಲುವಳಲ್ಲಾ' ಎಂಬ ಭಾವದೀಪ್ತಿ ಇಲ್ಲಿ ಕಂಡುಬರುತ್ತದೆ. 'ಹಸಿಮಣ್ಣು' ಎನ್ನುವುದು ಇಲ್ಲಿ ಸಂವೃದ್ಧಿಯ ಪ್ರತೀಕವಾಗಿದ್ದು, ಅದನ್ನು ಕೊಟ್ಟರೆ ಗುರಿಶಿಖರವನ್ನು ಮುಟ್ಟುತ್ತೇನೆ ಎಂಬ ಹೆಣ್ಣಿನ ಮನದಾಳದ ಮಹತ್ವಾಕಾಂಕ್ಷೆಯನ್ನು ರೂಪ ಅವರು ಪ್ರಚುರ ಪಡಿಸುತ್ತಾರೆ. ಈ ಕೆಳಗಿನ ಕವನದ ಸಾಲುಗಳು ಮುಂದೆ ಬಿಚ್ಚಿಡುತ್ತವೆ.

"ಒಂದಿಷ್ಟೇ ಇಷ್ಟು
ಹಸಿಮಣ್ಣು ನೀಡು ಗೆಳೆಯ

ನಾ ಅದರಲ್ಲೇ ಹೂತು
ಪರಿಪಕ್ವವಾಗಿ ಮಾಗಿ
ತ್ರಿವಿಕ್ರಮನಂತೆ ಬೆಳೆದು
ಕಲ್ಪವೃಕ್ಷವಾಗಿ ಹೊರಹೊಮ್ಮುತ್ತೇವೆ
ಯೋಚಿಸು ಗೆಳೆಯಾ ದಯಮಾಡಿ
ಎಲ್ಲಾ ಒಂದಿಷ್ಟೇ ಇಷ್ಟು
ಹಸಿಮಣ್ಣಿನ ಪ್ರಶ್ನೆಯಷ್ಟೇ!"[೧೨] (ಒಂದಿಷ್ಟು ಹಸಿಮಣ್ಣು)

'ಒಂದಿಷ್ಟು ಹಸಿಮಣ್ಣು ; ಕೃತಿಯಲ್ಲಿ ಬರುವ 'ಪ್ರಯತ್ನಗಳು' ಎಂಬ ಕವಿತೆಯು ಪುರುಷ ಕೇಂದ್ರಿತ ವ್ಯವಸ್ಥೆಯು ನಿರ್ಮಿಸಿದ ಚೌಕಟ್ಟಿನಿಂದ ಹೆಣ್ಣಾದವಳು ಯಾವುದೇ ಹೊಸ ಬೆಳಕನ್ನು, ಗಾಳಿಯನ್ನು ಕಾಣದೇ ತತ್ತರಗೊಂಡು, ಕರಾಳ ಸ್ಥಿತಿಯಲ್ಲಿ ತರಗುಟ್ಟಿಹೋದ ಅವಳ ಜೀವನದ ಚಿಂತಾಜನಕ ಸನ್ನಿವೇಶವನ್ನು, ಕರುಳು ಹಿಂಡುವಂತೆ, ಕಣ್ಣಿಗೆ ಕಟ್ಟಿಕೊಡುವಂತೆ ವಿವರಿಸುತ್ತದೆ. ಸಾವಿರಾರು ವರ್ಷಗಳಿಂದ ಮಹಿಳೆಯ ಕೈ – ಕಾಲುಗಳನ್ನು ಕಟ್ಟಿಹಾಕಿರುವ ಗಂಡಸಿನ ಕ್ರೌರ್ಯವನ್ನು ಕವಿತೆಯು ನಿರೂಪಿಸುತ್ತಲೇ, ತೀರಾ ಇತ್ತೀಚೆಗೆ ಮಹಿಳೆಯ ಹೋರಾಟದ ಫಲವಾಗಿ ಒಂದಿಷ್ಟು ಅವಕಾಶಗಳು ದೊರೆಯುತ್ತಿರುವ ಸಾಧ್ಯತೆಗಳನ್ನು ಪದ್ಯದ ಕೊನೆಯ ಸಾಲುಗಳು ಪ್ರತಿಧ್ವನಿಸುತ್ತವೆ. ಈ ರೀತಿಯ ಹೊಸಬೆಳಕು ಮೂಡಿದರೆ ತಾನು ಸಾಧನೆಯ ತುತ್ತ ತುದಿಯನ್ನು ಮುಟ್ಟಿ, ಸಂಸ್ಕೃತಿ ನಿರ್ಮಾಣದಲ್ಲಿ ಒಟ್ಟಾರೆ ರಾಷ್ಟ್ರ ಜೀವನದಲ್ಲಿ, ಪ್ರಬುದ್ಧ ನಾಡುಕಟ್ಟುವ ಅಭಿಯಾನದಲ್ಲಿ ಪಾಲ್ಗೊಳ್ಳುತ್ತೇನೆ ಎಂಬ ಅವಳ ಮನದಾಳದ ಆಶಾಕಿರಣ ಇಲ್ಲಿ ಪ್ರಜ್ವಲಿಸುತ್ತದೆ. ಕವಿತೆಯ ಸಾಲುಗಳು ಮೇಲಿನ ವಿವರಣೆಯನ್ನು ಹೀಗೆ ಕಟ್ಟಿಕೊಡುತ್ತವೆ.

"ಬೆಳಕು ಸೂಸುವ
ಶಕ್ತಿ ಕಣ್ಬೆಳಕಿನ ಕಿಡಿ
ನಿರಂತರ ಸಿಡಿದೋ ಏನೋ
ಮುಸುಗಿನೀಗ ಒಂದೋ, ಎರಡೋ
ಸಣ್ಣ ತೂತು!
ನಾಳೆಗಾಗಬಹುದು ಮತ್ತಷ್ಟು ಹೊಸತು !
ಕೊನೆಗೊಮ್ಮೆ,
ಮುಸುಗು ಹರಿಯಬಹುದು
ಬಂಧನ ಕಡಿಯಬಹುದು
ಹೊಸಗಾಳಿಗೆ, ಹೊಸ ಬೆಳಕಿಗೆ
ಮೈಯೊಡ್ಡಬಹುದು
ನಾಳಿನ ಭವ್ಯ ಭವಿತವ್ಯಕೆ
ಇಂದಿನೀ ಕಲ್ಲು ಅಡಿಪಾಯಕ್ಕೆ!"[೧೩] (ಪ್ರಯತ್ನಗಳು)

ಕವಿಯತ್ರಿ ರೂಪ ಅವರು ತಮ್ಮ ವಿಶಿಷ್ಟ ಕಾವ್ಯದ ಮುಖೇನ ಇಡೀ ಸ್ತ್ರೀ ಕುಲಕ್ಕೆ ಆತ್ಮವಿಶ್ವಾಸವನ್ನು, ಸ್ವಾಭಿಮಾನವನ್ನು ತುಂಬುವ ನಿಟ್ಟಿನಲ್ಲಿ ವಿಭಿನ್ನ ಆಲೋಚನೆಗಳನ್ನು ಮುಂದಿಡುತ್ತಾರೆ. 'ಇಲ್ಲಗಳ ಬದಿಗೊತ್ತಿ ಎಲ್ಲವಾಗುವ ಛಲ ನಮ್ಮೊಳಗಿದೆ' ಎನ್ನುವುದು ಇವರ ಅಭೀಪ್ಸೆಯಾಗಿದೆ. ಪಂಪ ಭಾರತದಲ್ಲಿ ಬರುವ "ಕುಲಂಕುಲಮಲ್ತು ಛಲಂಕುಲಂ ಅಣ್ಮುಕುಲಂ ಅಭಿಮಾನವೊಂದೇ ಕುಲಂ" ಎಂಬ ಕರ್ಣನ ಮಾತುಗಳನ್ನು 'ಗೆಲುವು ನಮ್ಮದೇ' ಎಂಬ ಪದ್ಯವು ನೆನಪಿಗೆ ತರುತ್ತದೆ. ಅಲ್ಲಿ ಕರ್ಣ ಭೀಷ್ಮನಿಗೆ ಈ ಮಾತುಗಳನ್ನು ಹೇಳಿದರೆ, ಇಲ್ಲಿ ಕವಿಯತ್ರಿಯವರು ಸ್ತ್ರೀ ಕುಲಕ್ಕೆ ಹೇಳುತ್ತಿದ್ದಾರೆ. ಈ ಸಂಗತಿಗಳನ್ನು 'ಗೆಲುವು ನಮ್ಮದೇ' ಪದ್ಯದ ಈ ಸಾಲುಗಳು ಅತ್ಯಂತ ಕರಾರುವಕ್ಕಾಗಿ ಸೃಜಿಸುತ್ತಿವೆ.

"ಬೇಕಿಲ್ಲ ಗೆಳತಿ ನಮಗೆ
ಯಾರ ಭಿಕ್ಷೆ
ಆತ್ಮವಿಶ್ವಾಸವೇ ನಮಗೆ
ಶ್ರೀರಕ್ಷೆ
ಇಲ್ಲಿ ನೀಲಿ ಬಾನಿಲ್ಲ
ಮಿನುಗುವ ತಾರೆಗಳಿಲ್ಲ
ಅದಿಲ್ಲ ಇದಿಲ್ಲ
ಇಲ್ಲ, ಏನೇನೂ ಇಲ್ಲ!
ಇಲ್ಲಗಳ ಬದಿಯೊತ್ತಿ
ಎಲ್ಲವಾಗುವ ಛಲ
ನಮ್ಮಲೇಕಿಲ್ಲ?"[೧೪] (ಗೆಲುವು ನಮ್ಮದು)

'ಒಂದಿಷ್ಟು ಹಸಿಮಣ್ಣು' ಕವನಸಂಕಲನದಲ್ಲಿ ಬರುವ 'ರಂಗವಲ್ಲಿ' ಕವಿತೆಯ ಸ್ತ್ರೀ ಆಂತರ್ಯದ ಅನನ್ಯತೆಯನ್ನು ಕಟ್ಟಿಕೊಡುತ್ತಲೇ, ಹೆಣ್ಣಿನ ಮನದಾಳದ ಸಂಘರ್ಷವನ್ನು ತೆರೆದಿಡುತ್ತದೆ. ಆದರೆ ಸ್ತ್ರೀ ಕುಲದ ಭವ್ಯತೆಯನ್ನು, ಅವಳಲ್ಲಿ ಅಡಗಿರುವ ಸಾಂಸ್ಕೃತಿಕ ಮಹೋನ್ನತಿಯನ್ನು ಗಂಡು ಪ್ರಧಾನ ಸಮಾಜವು ಗುರುತಿಸದೆ, ಅವನ ಕಾಲ್ತುಳಿತಕ್ಕೆ ಸಿಕ್ಕಿ ನಲುಗಿ ಹೋಗುತ್ತಿರುವುದನ್ನು ಕವಿತೆ ಅತ್ಯಂತ ಅರ್ಥಪೂರ್ಣವಾಗಿ ವಿವರಿಸುತ್ತದೆ. ಹೆಣ್ಣಿನ ಚಿತ್ತ ಕೇವಲ ಚಿತ್ತವಾಗಿರದೆ ಚಿತ್ತಾರದಂತೆ ಸದಾ ಶಿಲ್ಪಕಾರನ ರೀತಿಯಲ್ಲಿ ಕೆಲಸ ಮಾಡುತ್ತಿರುತ್ತದೆ. ಪ್ರತಿದಿನ ಬೆಳಿಗ್ಗೆ ಮನೆಯ ಬಾಗಿಲಿನ ಮುಂದೆ ರಂಗವಲ್ಲಿ ಹಾಕುವುದು ಕೇವಲ ಸಂಸ್ಕೃತಿಯ ಪ್ರತೀಕವಾಗಿರದೆ, ಹೆಣ್ಣಿನ ಆಂತರ್ಯದಲ್ಲಿ ಅಡಕವಾಗಿರುವ ಕಲಾಶ್ರೀಮಂತಿಕೆಯನ್ನು ಸೂಚಿಸುತ್ತದೆ. ಆದರೆ ಇದನ್ನು ಕಾಣಲು ವಿಫಲವಾಗಿರುವ ನಮ್ಮ ವ್ಯವಸ್ಥೆ ಅದನ್ನು ಚಿವುಟಿ ಹಾಕಲು ಪ್ರಯತ್ನಿಸುತ್ತಿರುವುದು ದುರಂತವೇ ಸರಿ. ಆದರೂ ಆತ್ಮಸ್ಥೈರ್ಯ ಕಳೆದುಕೊಳ್ಳದ ಹೆಣ್ಣು, ನಾಳೆಯ ಬದುಕಿಗಾಗಿ ಮತ್ತೆ ಹೊಸತನವನ್ನು ಅದೇ ರಂಗವಲ್ಲಿಯ ಮುಖೇನ ಸೃಜಿಸುವುದು ವಿಶಿಷ್ಟಪೂರ್ಣವಾಗಿದೆ. ಉಲ್ಲೇಖಕ್ಕಾಗಿ ಕವನದ ಈ ಸಾಲುಗಳನ್ನು ನೋಡಬಹುದು.

"ತಿಕ್ಕಿ ತೀಡಿ ಕಸಗುಡಿಸಿ
ನೀರೆರಚಿ ಹದ ಮಾಡಿ ಮಣ್ಣು
ಬಿಳುಪು ನುಣ್ಣಗಿನ ರಂಗೋಲಿ ಹಿಟ್ಟು
ತೋರು – ಹೆಬ್ಬೆರಳಿನ ಮಧ್ಯೆ
ನಾಜೂಕು ಬೊಟ್ಟು!
. . . . . . . . . . . . . . . .
. . . . . . . . . . . . . . . .
ಮಣ್ಣೊಳಗೆ ಹದ ಕಲಸಿದ
ಕಣ್ಣೀರಾಗಿ ಬೆರೆತು
ಅವರಿವರ ಅಡಿಗಳ
ಕೆಳಗೆ ಹೂತು
ಅನಾಥವಾಗಿ ಮರೆಯಾಗುತ್ತದೆ"[೧೫] (ರಂಗವಲ್ಲಿ)

ಸೋತು!
ಆದರೂ
ನಾಳೆಗೆ ಮತ್ತೆ ಹೊಸತು!

'ಸೂಜಿ ಹುಡುಕುವ ಅಜ್ಜಿ' ಪದ್ಯವು ಮಹಿಳೆಯಲ್ಲಿ ಹುದುಗಿರುವ ಮೇರುಪರ್ವತದಂಥಹ ಆತ್ಮವಿಶ್ವಾಸವನ್ನು ಮೈಚೆಲ್ಲುತ್ತದೆ. ಸೂಜಿ ಹುಡುಕುತ್ತಿರುವ ಅಜ್ಜಿ ಕೇವಲ ಸೂಜಿಯನ್ನು ಮಾತ್ರ ಶೋಧಿಸುತ್ತಿಲ್ಲ. ತನ್ನ ಬದುಕಿಗೆ ಆಸರೆಯಾಗುವ, ಮನಸ್ಸಿಗೆ ನೆಮ್ಮದಿ ನೀಡುವ, ಹೃದಯಕ್ಕೆ ಪ್ರೀತಿ ತುಂಬುವ ಜೀವನದ ಸ್ಫೂರ್ತಿಸೆಲೆಯನ್ನು ಹುಡುಕುತ್ತಿದ್ದಾಳೆ ಎನ್ನುವುದು ಕವನದ ಆಶಯ. ಹರಿದು ಚಿಂದಿಯಾಗಿರುವ ಸೀರೆಗೆ ತೇಪೆ ಹಾಕಲು ಇಲ್ಲಿ ಸೂಜಿಯ ಹುಡುಕಾಟ ನಡೆದಿದೆ. ಇದು ಕೇವಲ ಪ್ರತೀಕ ಮಾತ್ರ. ನೂರಾರು ವೈರುಧ್ಯಗಳಿಂದ ಛಿದ್ರವಾಗಿರುವ ಸಮಾಜವನ್ನು ತೇಪೆ ಹಾಕಿ ಸರಿದಾರಿಗೆ ತರುವ ಮಹತ್ವಾಕಾಂಕ್ಷೆಯನ್ನು, ಅನುಭವಶಾಲಿ ಅಜ್ಜಿಯ ಪ್ರಯತ್ನ ಪ್ರತಿಧ್ವನಿಸುತ್ತದೆ. ಈ ಸೃಜನಶೀಲ ಕ್ರಿಯೆಗೆ ಪ್ರತಿಯೊಬ್ಬರೂ ಕೈಜೋಡಿಸಿದಾಗ ಮಾತ್ರ ಅಜ್ಜಿಯ ಮನದಾಳದ ಇಂಗಿತ ಈಡೇರುತ್ತದೆ. ಇಲ್ಲಿ ಅಜ್ಜಿಯ ಪ್ರಯೋಗ ಮತ್ತು ಸೂಜಿಯ ಪ್ರಯೋಗ ಅರ್ಥಪೂರ್ಣವಾಗಿದೆ. ಇಲ್ಲಿ ಬರುವ ಮುದುಕಿ ಪರಿಪಕ್ವತೆಯ ಸೂಚಕವಾಗಿದ್ದಾಳೆ. ಸೂಜಿಯು ಹದಗೆಟ್ಟಿರುವ ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸುವ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಪದ್ಯದ ಕೆಲವು ಸಾಲುಗಳು ಮೇಲಿನ ಪ್ರಸ್ತಾವನೆಗೆ ಕೈಗನ್ನಡಿಯಾಗಿವೆ. ಆ ಸಾಲುಗಳೆಂದರೆ

"ಕಾಣದ ಕಣ್ಣು ಮತ್ತಷ್ಟು
ಅರಳರಳಿಸಿ ಕಾಯುತ್ತಾಳೆ!
ಸೂಜಿಗಾಗಿ ನೆಲಸಾರಿಸುವಾಗ
ಚುಚ್ಚಿದ ಸೂಜಿಯ ಮೊನೆ

ಗಬಕ್ಕನೆ ಹಿಡಿದು
ಹಿಡಿಮುಷ್ಟಿಯೊಳಗೆ
ಇಡಿ ಬದುಕು ಸಿಕ್ಕಂತೆ'
ಸಂಭ್ರಮಿಸುತ್ತಾಳೆ!
ಹೌದು ಹರಿದ ಸೀರೆಗೆ
ತೇಪೆ ಬೇಡವೇ?"[೧೬] (ಸೂಜಿ ಹುಡುಕುವ ಅಜ್ಜಿ)

ರೂಪ ಹಾಸನ ಅವರ ಕವಿತೆಗಳಲ್ಲಿ 'ಕನ್ನಡಿಯು ಒಂದು ಪ್ರಬಲ ಪ್ರತಿಮೆಯಾಗಿ ಮೇಲಿಂದ ಮೇಲೆ ಬಳಕೆಯಾಗುತ್ತದೆ. 'ಕನ್ನಡಿಗಳು ಬೇಕು' ಎಂಬ ಕವಿತೆಯಲ್ಲಿ ನಮ್ಮ ಎತ್ತರವನ್ನು ಅಳೆಯಲು, ಮುಖಭಾವವನ್ನು ನೋಡಿಕೊಳ್ಳಲು, ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುವ ಭ್ರಮೆಗಳನ್ನು ಕಳಚಿಕೊಳ್ಳಲು, ತನ್ನಲ್ಲೇ ತಾನು ಆನಂದಿಸಲು ಹೆಣ್ಣಿನ ಪಾಲಿಗೆ ಕನ್ನಡಿಗಳು ಅನಿವಾರ್ಯ ಎಂಬ ಸಂಗತಿ ಇಲ್ಲಿ ವೇದ್ಯವಾಗುತ್ತದೆ. ಪುರುಷನ ಆತ್ಮೀಯತೆ, ಪ್ರೀತಿ, ಸುಖ ಸಂತೋಷಗಳು ದಕ್ಕದ ಅದೆಷ್ಟೋ ಅಸಂಖ್ಯಾತ ಹೆಣ್ಣುಮಕ್ಕಳಿಗೆ ಕನ್ನಡಿಯು ಜೀವಂತ ಗೆಳೆಯನಾಗಿ ಪರಿಣಮಿಸುತ್ತದೆ ಎನ್ನುವುದೇ ಒಟ್ಟಾರೆ ಕವನದ ಅಂತರಾಳವಾಗಿದೆ. ಉದಾಹರಣೆಗೆ,

"ಎತ್ತರಗಳ ಅಳೆಯಲು
ಬದಲಾದ ಕನಸುಗಳ ಗುರುತಿಸಲು
ದಾರಿಗೆ ಹಿಡಿದಿದೆಯೇ ಗೆದ್ದಲು?
ಇಲ್ಲವೇ ಗುರಿಯೆಂಬ ಪೂರ್ಣ ವಿರಾಮಕ್ಕೆ ಮಗ್ಗುಲು
ಸೋಲುಗಳ ಮೆಟ್ಟಿ ಗೆಲುವಿನ ಮೆಟ್ಟಿಲಾಗಿಸಲು
ಎಲ್ಲ ಎಲ್ಲವುಗಳ ಪ್ರತಿಬಿಂಬಿಸಲು"[೧೭] (ಕನ್ನಡಿಗಳು ಬೇಕು)

'ಒಂದಿಷ್ಟು ಹಸಿಮಣ್ಣು' ಕೃತಿಯಲ್ಲಿ ಬರುವ 'ರಸಿಕ ಕವಿಗೆ' ಎಂಬ ಕವಿತೆಯು ಈ ಹಿಂದಿನ ಕವಿಪುಂಗವರೆಲ್ಲಾ ಸ್ತ್ರೀ ಆಂತರ್ಯದ ಅಸ್ಮಿತೆಯನ್ನು ಶೋಧಿಸುವಲ್ಲಿ, ಆಕೆಯ ಬದುಕಿನ ಆಳ – ಅಗಲಗಳನ್ನು ಅನಾವರಣಗೊಳಿಸುವಲ್ಲಿ, ಮನದಾಳದಲ್ಲಿ ಹುದುಗಿರುವ ಭಾವಗಳನ್ನು ಬೆತ್ತಲೆ ಮಾಡುವಲ್ಲಿ, ಹೆಣ್ಣಿನ ಅಂತರಂಗದ ಶ್ರೇಷ್ಠತೆಯನ್ನು ನಿರೂಪಿಸುವಲ್ಲಿ ವಿಫಲವಾದ ಇವರ ವ್ಯರ್ಥ ಪ್ರಯತ್ನಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತದೆ. ಕವಿಗಳಾದವರು ಸ್ತ್ರೀ ಬದುಕಿನ ವಿಭಿನ್ನ ಆಯಾಮಗಳನ್ನು ಶೋಧಿಸಲೇ ಇಲ್ಲ ಎಂಬ ಭಾವ ಅಭಿವ್ಯಕ್ತಿಗೊಂಡಿದೆ. ತಿರುಳು ತೆಗೆಯುವ ಬದಲು ಕೇವಲ ಕರಟವನ್ನು ಎರೆದ ಕವಿಯ ಲೇಖನಿಯನ್ನು, ಅವನ ಬುದ್ಧಿಯನ್ನು, ಸೀಮಿತವಾದ ಭಾವವಲಯವನ್ನು ರೂಪಾ ಅವರು ವಿಡಂಬಿಸುತ್ತಾರೆ. ಹೀಗೆಂದ ಮಾತ್ರಕ್ಕೆ ಸ್ತ್ರೀ ಕುಲದ ಪ್ರತಿಭೆ, ಅಂತರಂಗದ ಸೌಂದರ್ಯ, ಅವಳಲ್ಲಿ ಹುದುಗಿರುವ ಬಾಳಿನ ಅಸ್ಮಿತೆ, ಬುದ್ಧಿಯ ಚುರುಕುತನ, ಸಂಸಾರವನ್ನು ಕಟ್ಟಿ ನಡೆಸುವ ಅವಳ

ಚಾಕುಚಾಕ್ಯತೆ ಇತ್ಯಾದಿಗಳನ್ನು ಯಾರು ಕೂಡ ಕಡೆಗಣಿಸಲು ಸಾಧ್ಯವೇ ಇಲ್ಲ ಎನ್ನುವುದು ಕವಿಯತ್ರಿಯವರ ಅಭಿಮತವಾಗಿದೆ. ಇಲ್ಲಿ ಪುರಾಣ ಕವಿಗಳು ತಮ್ಮ ಕಾವ್ಯಗಳಿಗೆ ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ಬಳಸಿಕೊಂಡರೇ ವಿನಃ ಅವಳಲ್ಲಿನ ತ್ಯಾಗ, ಪ್ರೀತಿ, ಆತ್ಮಗೌರವ, ಸ್ವಾಭಿಮಾನ, ಜವಾಬ್ದಾರಿಪ್ರಜ್ಞೆ ಇತ್ಯಾದಿಗಳನ್ನು ಗಮನಿಸಲೇ ಇಲ್ಲ ಎನ್ನುವುದು ಇಲ್ಲಿನ ಮುಖ್ಯ ಮನೋಧೋರಣೆಯಾಗಿದೆ. ಉದಾಹರಣೆಗಾಗಿ ಕೆಲವು ಸಾಲುಗಳನ್ನು ಪ್ರಸ್ತಾಪಿಸುವುದಾದರೆ,

"ನೀ ಏನೇ ಹೇಳು
ಎರೆಡರಲಿ ನಾಲ್ಕು
ಆಗುತ್ತದೆಯೇ ಹದಿನಾಲ್ಕು
ಹತ್ತಾರು ಗೋಡೆಗೆ ಒಂದೇ ಮಾಡು
ನೂರಾರು ಕಡ್ಡಿಗಳ ಹಿಡಿದಿಟ್ಟಿದೆ
ಮೊರಕೆಯೊಂದರ ನೂಲು
. . . . . . . . . . . . . . . .
. . . . . . . . . . . . . . . .
ತಿರುಳು ಬಿಟ್ಟು ಕರಟ ಹೆರೆವ
ನಿನ್ನ ಈ ಪರಿಗೆ ನಗಲೇ
ಅಳಲೆ?"[೧೮] (ರಸಿಕ ಕವಿಗೆ)

'ಒಂದಿಷ್ಟು ಹಸಿಮಣ್ಣು' ಕವನ ಸಂಕಲನದ ಬಗ್ಗೆ ನಾಡಿನ ಕೆಲವು ವಿಮರ್ಶಕರ ಅಭಿಪ್ರಾಯಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. "ಅತ್ಯಂತ ಆರೋಗ್ಯಕರ ನಿಲುವುಗಳನ್ನು ಹೊಂದಿರುವ ರೂಪಾರ ಕವಿತೆ ತನ್ನದೇ ಹಾದಿಯನ್ನು ಗುರುತಿಸಿಕೊಂಡು ಬೆಳೆಯಬೇಕಾಗಿದೆ. ಆಧುನಿಕ ಕನ್ನಡ ಕಾವ್ಯದ ಅಭಿವ್ಯಕ್ತಿ ವಿಧಾನದ ಮೇಲೆ ನವ್ಯ ಕಾವ್ಯದ ಕಾಲದಿಂದ ಆರಂಭವಾದ ಬಂಡಾಯ ಕಾಲದಲ್ಲೂ ಮುಂದುವರಿದ ರೂಪದ ಮುದ್ರೆ ಅಚ್ಚೊತ್ತಿರುವಾಗ ತನ್ನದೇ ದಾರಿಯನ್ನು ಗುರುತಿಸಿಕೊಂಡು ಬೆಳೆಯುವುದು ಸುಲಭವಲ್ಲ. ಬರೆಯುವವರೆಲ್ಲ ಆ ತನ್ನ ದಾರಿಗಾಗಿ ತಡಕುತ್ತಲೇ ಇರುತ್ತಾರೆ"[೧೯] (ಪ್ರೊ. ಸ. ಉಷಾ ಅರಸಿಕೆರೆ)

ಚಿತ್ರದ ಕಲ್ಪನೆ ಮತ್ತು ಸ್ವಾಚ್ಛಂದ್ಯದ ಮಾತುಗಾರಿಕೆಯಿಂದಾಗಿ ಒಂದು ಹಂತದ ಅರ್ಥವಲಯವನ್ನು ತಮ್ಮ ಕವನಗಳಲ್ಲಿ ರೂಪ ಅವರು ಸೃಷ್ಟಿಸಿಬಿಡುತ್ತಾರೆ. ಕವಿತೆಗೊಗ್ಗುವ ಲಯಗಾರಿಕೆಯೊಂದನ್ನು ಅಳತವಾಗಿ ಪಳಗಿಸಿ ಒಂದು ರೂಪಕದ ಮೂಲಕ ಮಾತಾಡುವ ಮಜಲಿಗೆ ಅವರು ಬಂದಿದ್ದಾರೆ. ಗಾಳಿಪಟ, ಬೋನ್ಸಾಯ್, ಕಣ್ಕಾಪು ಬಿಗಿದ ಕುದುರೆ, ಬೆಳಕು ಬೇಕು, ಎಚ್ಚರ ಮೊದಲಾದ ಕವಿತೆಗಳಲ್ಲಿ ವಸ್ತು ಪ್ರತಿರೂಪವೊಂದನ್ನು ಸೃಷ್ಟಿಸಿ ತನ್ನ ಒಲುವೆಯನ್ನೂ ಪ್ರದರ್ಶಿಸುತ್ತಾರೆ. (ಡಾ. ವಸಂತಕುಮಾರ ಪೆರ್ಲ)

ಎಚ್ಚರ ಮತ್ತು ಆತ್ಮವಿಶ್ವಾಸವನ್ನು ಈ ಸಂಕಲನದ ಎಲ್ಲಾ ಕವಿತೆಗಳೂ ಕಾಯ್ದುಕೊಂಡಿವೆ. ಆದರೆ, ಅವು ಬಹಳಷ್ಟು ಕವಯಿತ್ರಿಯರು ಪ್ರಕಟಪಡಿಸಿದ ಬಂಡಾಯ ಗುಣದ ನಿರ್ಜೀವ ಹೇಳಿಕೆಗಳಾಗೇ ಉಳಿಯುವುದಿಲ್ಲ ಎನ್ನುವುದು ಗಮನಾರ್ಹ. ಮಹಿಳೆಯರ ಬಗೆಗಿನ ಅನುಕಂಪದ ರಚನೆಗಳಲ್ಲಿ, ಅವು ಕಾಡುವ ಗುಣ ಹೊಂದಿಲ್ಲದೆ ಇದ್ದರೂ ಅದರ ಹಿಂದಿನ ಆರೋಗ್ಯಕರ ನಿಲುವು ಮೆಚ್ಚುಗೆ ಮೂಡಿಸುತ್ತದೆ. ಬಹಳಷ್ಟು ಕವಿಯತ್ರಿಯರಲ್ಲಿ ಇಲ್ಲದ ಆತ್ಮ ವಿವೇಚನೆ, ಆತ್ಮಶೋಧನೆ ರೂಪ ಅವರಲ್ಲಿದೆ. (ಎಂ.ಆರ್. ಭಗವತಿ, ಬೆಂಗಳೂರು).

ಲೇಖಕಿಯ ಸೂಕ್ಷ್ಮ ಪ್ರಜ್ಞೆ, ಕಾಲಘಟ್ಟದ ಸತ್ಯಗಳನ್ನು ತೆರೆದಿಡಲು ಬಯಸುವ ಮನಸ್ಸಿನ ಒಳತೋಟಿಗಳು, ಕವಿತೆಗಳ ಮೊದಲ ಓದಿಗೆ ಹೊಳೆಯದಿದ್ದರೂ ಮೆಚ್ಚುಗೆಯಾಗುತ್ತದೆ. ತನ್ನ ಕವಿತೆಗಳ ಮೂಲಕ ಸಂವಾದಕ್ಕಿಳಿಯುವ ಕವಿಯತ್ರಿ ಕವಿತೆಗಳ ಉತ್ತಮಿಕೆ ಕಾಯ್ದುಕೊಳ್ಳುವಲ್ಲಿ ಸಫಲರಾಗಿದ್ದಾರೆ. ಇಲ್ಲಿನ ಕವಿತೆಗಳಲ್ಲಿ ಒಂದಿಷ್ಟು ಹಸಿಮಣ್ಣಿನ ಬಣ್ಣವಿದೆ. ಹಸಿಮಣ್ಣ ಬಣ್ಣ, ಒಂದಿಷ್ಟು ನಾದ ಭೂಮಿಯಿರುವಷ್ಟು ಹರಡಿಕೊಳ್ಳಲಿ. (ಚಂದ್ರಚೂಡ್ ಹಾಸನ)

ನೀವು ಗಟ್ಟಿಯಾಗುವ – ಗಟ್ಟಿಯಾಗಿರುವ ಎಲ್ಲಾ ಲಕ್ಷಣಗಳನ್ನು ಈ ಪದ್ಯಗಳು ಸಾರಿ ಹೇಳುವಂತಿದೆ. ನಿಮಗೆ ಭಾಷೆಯ ಮೇಲೆ ಹಿಡಿತವಿದೆ. ಭಾವನೆಗಳನ್ನು ಸಂಯಮದಿಂದ ಮಂಡಿಸುವ, ವಿವಿಧ ಅರ್ಥಗಳಿಗೆ ಹಬ್ಬಿಸುವ ಕಲೆಗಾರಿಕೆ ಇದೆ ಹಾಗೂ ಸಮಕಾಲೀನ ಜಗತ್ತಿನ ಆಗು ಹೋಗುಗಳನ್ನು ಬಹುಸೂಕ್ಷ್ಮವಾಗಿ ನಿರೀಕ್ಷಿಸುವ, ಸ್ಪಂದಿಸುವ ಮನಸ್ಸು ಇದೆ. ಹೀಗಾಗಿ ಕವಿತೆಯೊಳಕ್ಕೆ ಬರುವ ಜಗತ್ತಿನ ವಸ್ತುಗಳು ನಿಮ್ಮ ಮನಸ್ಸಿನಲ್ಲಿ ಮಾಗಿ, ಕುದ್ದು, ವೈಯಕ್ತಿಕ ಚಹರೆ ಹೊತ್ತು ಬರುತ್ತವೆ. ಹೀಗಾಗಿ ಕವಿತೆಗಳು ಏಕಮುಖಿಯಾಗುವುದಿಲ್ಲ. (ಪ್ರಹ್ಲಾದ ಅಗಸನಕಟ್ಟೆ, ಹುಬ್ಬಳ್ಳಿ)

ನಿಮ್ಮ ಕವಿತೆಗಳು ತಾಜಾ ಹೂವಿನ ತಾಜಾ ಪರಿಮಳದಂತೆ. ಇದೀಗ ಬಿದ್ದ ಮೊದಲ ಮಳೆಯಿಂದೆದ್ದ ಮಣ್ಣಿನ ವಾಸನೆಯಂತೆ. ಅದರಲ್ಲಿರುವ ಲವಲವಿಕೆ ಗುರುತಿಸಿದ್ದು ಕವಿತೆಗಳನ್ನು ಓದಿ ನಿಮ್ಮ ಅಭಿವ್ಯಕ್ತಿಯ ರೀತಿ ನಿಜಕ್ಕೂ ತುಂಬಾ ಖುಷಿಯಾಯಿತು. (ಡಾ. ಸರಜೂ ಕಾಟ್ಕರ್, ಬೆಳಗಾವಿ)

ನನ್ನನ್ನು ಬಹಳ ಹೊತ್ತು ಚಿಂತನೆಗೆ ತೊಡಗಿಸಿದ ಸಾಲುಗಳಲ್ಲಿ

ಧ್ವನಿಯಡಗಿಸಿದ ಕಂಠವಾಗಿ
ಹನಿಯಡಗಿಸಿದ ಕಡಲಾಗಿ
ಅವ್ಯಕ್ತ ಹಿಡಿದಿರಿಸಿದ ಒಡಲಾಗ
ನೋವುಗಳು ಮಾತಾಗುವುದೇ ಇಲ್ಲ
ಬದಲಾಗಿ ಹಾಡಾಗುತ್ತವಲ್ಲಾ!

ಇವು ತುಂಬಾ ಮಹತ್ವವಾದವು. ಮೂರ್ತದಲ್ಲಿ ಅಮೂರ್ತವಾದವು ಹೇಗಿರುತ್ತವೆಂಬುದನ್ನು ಈ ಸಾಲುಗಳು ತೋರಿಸಿಕೊಡುತ್ತವೆ. ನಿಮ್ಮ ಎಲ್ಲ ಕವಿತೆಗಳಲ್ಲಿ ವಿಶಿಷ್ಟವಾದ ಕಲ್ಪಕಶಕ್ತಿ ಇರುವುದನ್ನು ಕಂಡಿದ್ದೇನೆ. ಖಂಡಿತವಾಗಿ ಈ ಹೊಸ ಶತಮಾನದ ಮಹತ್ವದ ಕವಯತ್ರಿಯಾಗಿ ನಿಲ್ಲುವ ಎಲ್ಲ ಲಕ್ಷಣಗಳೂ ನಿಮ್ಮ ಕವಿತೆಯಲ್ಲಿವೆ. (ಡಾ. ಗುರುಲಿಂಗ ಕಾಪಸೆ, ಧಾರವಾಡ)

ಅರ್ಥಗಳನ್ನು ಅಡಗಿಸಿಟ್ಟುಕೊಂಡಿರುವ ಕವಿತೆಯ ಸಾಲುಗಳು, ಮಣ್ಣಿನ ಅರ್ಥ ಬರೆಯಲು ಉಳುವ ಸಾಲುಗಳು, ಬದುಕಿನ ಮುಂದಿರುವ ಮುಗಿಯದ ಸವಾಲುಗಳು, ಹೀಗೆ ಕವಿತೆಯನ್ನು ಚಲನಶೀಲವಾಗಿ ನೋಡಿಕೊಳ್ಳುವ ರೂಪ ಹಾಸನ ಅವರ ಬರವಣಿಗೆ ನನಗೆ ಪ್ರಿಯವಾದದ್ದು. ಅವರ ಕವನಗಳು ಅತಿ ಹೆಚ್ಚಿನ ಕಾವ್ಯಾಸಕ್ತರನ್ನು ಸೆಳೆದುಕೊಳ್ಳಲೂ ಇದೇ ಕಾರಣವಿರಬಹುದು. (ಜರಗನಹಳ್ಳಿ ಶಿವಶಂಕರ್, ಬೆಂಗಳೂರು)

ಶ್ರೀಮತಿ ರೂಪಹಾಸನ ಅವರ 'ಬಾಗಿಲಾಚೆಯ ಮೌನ' ಕೃತಿಯಲ್ಲಿ ಬರುವ ಅನೇಕ ಕವಿತೆಗಳು ಶತಶತಮಾನಗಳಿಂದ ಪುರುಷನ ಕ್ರೌರ್ಯವೆಂಬ ಅಗ್ನಿಕುಂಡಕ್ಕೆ ಬಿದ್ದು, ನರಳುತ್ತಿರುವ ಹೆಣ್ಣಿನ ಆಕ್ರಂಧನವನ್ನು ವಿಭಿನ್ನ ಆಯಾಮಗಳಲ್ಲಿ ತಲಸ್ಪರ್ಶಿಯಾಗಿ ಕಟ್ಟಿಕೊಡುತ್ತದೆ. ಇಲ್ಲಿ ಬರುವ 'ನಿರಂತರ' ಕವಿತೆಯು ಸಾವಿರಾರು ವರ್ಷಗಳಿಂದ ಪುರುಷನ ಕಾಲ್ತುಳಿತಕ್ಕೆ ಸಿಲುಕಿರುವ ಹೆಣ್ಣಿನ ಚಿಂತಾಜನಕ ಸ್ಥಿತಿಯನ್ನು ಕರುಳು ಚುರುಕ್ ಎನ್ನುವ ರೀತಿಯಲ್ಲಿ ವಿವರಿಸುತ್ತದೆ. ಈ ಕವಿತೆಯೂ ಕೂಡ ಅಡುಗೆ ಮನೆಯ ಆವರಣದಲ್ಲೇ ಜನ್ಮ ತಾಳುತ್ತದೆ. ಅಲ್ಲಿ ಬರುವ ಉರಿಯುವ ಒಲೆ, ಅನ್ನದ ಪಾತ್ರೆ, ಎಷ್ಟು ಬೆಂದರೂ ಅನ್ನವಾಗದ ಅಕ್ಕಿ, ಇತ್ಯಾದಿ ಅಂಶಗಳು ಕವಿತೆಯ ಕರಾರುವಕ್ಕಾದ ನಿರೂಪಣೆಯನ್ನು ಪರಿಣಾಮಕಾರಿಯಾಗಿಸಿವೆ. ಉದಾಹರಣೆಗೆ ಕೆಲವು ಸಾಲುಗಳನ್ನು ಉಲ್ಲೇಖಿಸುವುದಾದರೆ,

"ಶತಶತಮಾನಗಳಿಂದ
ಧಗಧಗನೆ ಹೊತ್ತಿ
ಉರಿಯುತ್ತಲೇ ಇದೆ
ಈ ಅಗ್ನಿಕುಂಡ

ಬೇಯುತ್ತಲೆ ಇದೆ
ತಪ್ಪಲೆಯೊಳಗೆ
ಅನ್ನವಾಗದ ಅಕ್ಕಿ

ಮತ್ತೆ ಮತ್ತೆ
ಸೌದೆಯೊಟ್ಟಿ
ಉರಿ ಹೆಚ್ಚಿಸುವ ಕಾಯಕ"[೨೦] (ನಿರಂತರ)

'ಬಾಗಿಲಾಚೆಯ ಮೌನ' ಕವನಸಂಕಲನದಲ್ಲಿ ಬರುವ 'ಬಗೆ ಬಗೆ' ಎಂಬ ಪದ್ಯವನ್ನು ನುಗ್ಗೇಮರ ಮತ್ತು ನುಗ್ಗೇ ಬೀಜ ಇವುಗಳ ಪ್ರತಿಮೆಗಳ ಸುತ್ತ ಹೆಣೆಯಲಾಗಿದೆ. ಭೂತಳದ ಸಾರವನ್ನೆಲ್ಲಾ ಹೀರಿಕೊಂಡು, ನೆಲವನ್ನು ಒದ್ದು, ಮೇಲೆದ್ದು ಬರುವ ಉತ್ಕಟವಾದ ಭಾವತೀವ್ರತೆಯನ್ನು ಅಭಿವ್ಯಕ್ತಿಸಲಾಗಿದೆ. ಅಂದರೆ, ಹೆಣ್ಣಿಗೆ ಅವಕಾಶ ಕೊಟ್ಟರೆ ಯಾವ ಸಾಧನೆಯನ್ನಾದರೂ ಮಾಡಬಲ್ಲ ಆಂತರ್ಯದ ತುಡಿತವನ್ನು ಪದ್ಯದ ಕೆಲವು ಸಾಲುಗಳು ಪ್ರಚುರಪಡಿಸುತ್ತವೆ. ಇಲ್ಲಿ ಬರುವ ಹೆಣ್ಣಿನ ವಿಕಾಸ ಎಷ್ಟೆಂದರೆ ಮುಗಿಲನ್ನು ಮುಟ್ಟುವ ತವಕ ಅವಳದು. ಆದರೆ ಈ ತವಕವನ್ನು ಹತ್ತಿಕ್ಕಬಾರದೆಂಬುದು ಕವಿತೆಯ ಒಟ್ಟಾರೆ ಆಶಯವಾಗಿದೆ. ಗಾಳಿ, ನೀರು, ಗೊಬ್ಬರ ದೊರೆತರೆ ಹೇಗೆ ಸಸ್ಯವು ಬೆಳೆದು ಹೆಮ್ಮರವಾಗುತ್ತದೋ, ಅದೇ ರೀತಿ ಹೆಣ್ಣಿಗೆ ರೆಕ್ಕೆ ಬಿಚ್ಚಿ ಹಾಡಲು, ಗರಿಬಿಚ್ಚಿ ಹಾಡಲು, ಅಣಿವು ಮಾಡಿಕೊಟ್ಟರೆ ಇಡೀ ಸ್ತ್ರೀ ಕುಲದ ಮಹೋನ್ನತಿ ಸಾಕ್ಷಾತ್ಕಾರಗೊಳ್ಳುತ್ತವೆ. ಪದ್ಯದ ಕೆಲವು ಧ್ವನಿಪೂರ್ಣ ಸಾಲುಗಳೆಂದರೆ

"ಯಾವ ಪರುಷಸ್ಪರ್ಶವೋ
ಆಳಕ್ಕೆ ಬೇರನಿಳಿಸಿ
ನೆಲದೊಡಲು ಸೀಳಿ
ಮೊಳಕೆಯೊಡೆಸಿ
ಬುರಬುರನೆ ಎತ್ತರಕ್ಕೇರಿ
ಆಕಾಶವನ್ನೇ ಮುಟ್ಟುವ ಚಪಲ
ನೆಲವನೊದ್ದು ಬಾನನಪ್ಪುವ ಹಂಬಲ
ಆಸೆ ಬುರುಕ, ನುಗ್ಗೇ ಮರದ ಕಾಂಡಕ್ಕೆ"[೨೧] (ಬಗೆ ಬಗೆ)

ಹೀಗೆ 'ಬಗೆ ಬಗೆ' ಎಂಬ ಕವಿತೆಯು ಹೆಣ್ಣು ಕುಲದ ಅಗಾಧ ಶಕ್ತಿಯನ್ನು ತೆರೆದಿಡುತ್ತದೆ, ಪೋಷಣೆ ದೊರೆತರೆ ಪ್ರಚಂಡ ಶಕ್ತಿಯಾಗಿ, ಸ್ಫೂರ್ತಿಯ ಸೆಲೆಯಾಗಿ, ಭೂಮಿ – ಆಕಾಶಗಳಿಗೆ ಸೇತುವೆಯಾಗಿ, ನಿಲ್ಲುವಂತಹ ಅಪ್ರತಿಮ ಶಕ್ತಿ ಸಾಮರ್ಥ್ಯಗಳನ್ನು ಹೆಣ್ಣು ಪಡೆಯಬಲ್ಲಳು ಎಂಬ ಸಂಗತಿಯನ್ನು ಅತ್ಯಂತ ಧ್ವನಿಪೂರ್ಣವಾಗಿ ಪ್ರತಿಮಾತ್ಮಕವಾಗಿ ವಿವರಿಸಿವೆ.

"ಬಣ್ಣದ ಅಂತಃಪುರಕ್ಕೆಲ್ಲ
ಜೀವ ಬಂದಿದೆ ಈಗ
ಇವಳು ಕಚಗುಳಿ ಇರಿಸಿ
ಕುಣಿಸಿದಂತೆಲ್ಲಾ
ತಕಥೈ ಕುಣಿಯುತ್ತಾ
ಅಪೂರ್ಣ ಕಥೆಗಳೇ
ಇತಿಹಾಸವಾಗಿ ಬಿಡುವ

ಈ ನಾಡಿನಲ್ಲಿ
ಮಾನುಷ ಬಣ್ಣಗಳು
ಇವಳ ಅವ್ವಾಯಿಸಿಕೊಂಡೂ
ಅರ್ಥವಿಲ್ಲದ ಕಥೆಗಳಾಗಿ ಬಿಡುತ್ತವೆ"[೨೨] (ಅನನ್ಯ ಹೇಮೆ)

'ಅನನ್ಯ ಹೇಮೆ' ಎಂಬ ಕವಿತೆಯಲ್ಲಿ ಬರುವ ಈ ಸಾಲುಗಳು ಮತ್ತೆ ಮತ್ತೆ ಸ್ತ್ರೀ ಅಸ್ಮಿತೆಯನ್ನು ಒತ್ತಿ ಹೇಳುತ್ತವೆ. ಇವಳ ಶಕ್ತಿ ಸಾಮರ್ಥ್ಯಗಳನ್ನು ಬಳಸಿಕೊಂಡು ಕೆಲವು ವ್ಯಕ್ತಿಗಳು ಇತಿಹಾಸದ ಅಪೂರ್ಣ ಕಥೆಗಳಾಗಿ, ಸಾಂಸ್ಕೃತಿಕ ನಾಯಕರಾಗಿ, ವಿಜೃಂಭಿಸುತ್ತಾರೆ. ಆದರೆ, ಗಂಡಿನ ಎಲ್ಲಾ ಸಾಧನೆಗೂ ಸ್ಫೂರ್ತಿಯ ಬಿಂದುವಾಗಿರುವ, ಪ್ರೇಮದ ಸಿಂಧೂವಾಗಿರುವ ಹೆಣ್ಣು ಮಾತ್ರ ನಾಲ್ಕು ಗೋಡೆಗಳ ಮಧ್ಯೆಯೇ ಉಳಿದು ಬಿಡುತ್ತಾಳೆ ಎಂಬ ವಿಷಾದವನ್ನು ಇಡೀ ಕವಿತೆ ಹೊರಚೆಲ್ಲುತ್ತದೆ. ಹೇಗೆಂದರೆ, ಶ್ರಮಿಕರ ದುಡಿಮೆಯಿಂದ ಶ್ರೀಮಂತರು, ಮೆರೆಯುವ ರೀತಿಯಲ್ಲಿ ಅನೇಕರು ಹೆಣ್ಣನ್ನು ತಮಗೆ ಬೇಕಾದಂತೆ ಬಳಸಿಕೊಂಡು, ತಾವು ಮಾತ್ರ ಬೆಳೆಯುವ ಪರಿಯನ್ನು ಕವನ ಕಟ್ಟಿಕೊಡುತ್ತದೆ.

"ನಾನು ನಿನಗಾಗಿ ಕಾಯುತ್ತಿಲ್ಲ
ಕಾಲ ಅನಂತ ನನಗೆ ಅವಸರವಿಲ್ಲ
ಬಾರದಿದ್ದರೇ ಎಂಬ ಆತಂಕವಿಲ್ಲ
ಹುಡುಕಾಟದ ಕೊನೆ ನೀನೆಂಬ ನಂಬಿಕೆಯಿಲ್ಲ.
ಇಂದಲ್ಲ ನಾಳೆ ನನ್ನ ತೆಕ್ಕೆಗೇ
ಬಂದು ಬೀಳುವೆಯೆಂಬ, ಭರವಸೆಯಿದೆ
ನನ್ನದೆಯೊಳಗೆ ನಿನ್ನ ಪ್ರತಿರೂಪವಿದೆ . . . .
ಬಿಟ್ಟು ಎಲ್ಲಿ ಹೋಗುವ ಬರದೆ?"[೨೩]

'ಬಾಗಿಲಾಚೆಯ ಮೌನ' ಕವಿತೆಯ ಕೃತಿಯ ಶೀರ್ಷಿಕೆಯಾಗಿದ್ದು, ಓದುಗರ ಗಮನವನ್ನು ಸೆಳೆದುಕೊಳ್ಳುವ ಒಂದು ಅದ್ವಿತೀಯವಾದ ರಚನೆಯಾಗಿದೆ. ರೂಪ ಅವರು ಇಲ್ಲಿ ಬಾಗಿಲನ್ನು ಒಂದು ಪ್ರತೀಕವಾಗಿ ಬಳಸಿಕೊಂಡು ಬಾಗಿಲನ್ನು ದಾಟುವ ಹಾಗೂ ದಾಟಲಾಗದ ಸನ್ನಿವೇಶದಲ್ಲಿರುವ ಸ್ತ್ರೀ ಮನದಾಳದ ದ್ವಂದ್ವತೆಯನ್ನು ಕಟ್ಟಿಕೊಡುತ್ತಲೇ ಭರವಸೆಯ ಚಿಲುಮೆಯಂತೆ ಹೆಣ್ಣನ್ನು ಇಲ್ಲಿ ಪ್ರತಿಕೃತಿಸುತ್ತಾರೆ. ಕಾಲ ಅನಂತವಾಗಿದ್ದು, ಒಂದಲ್ಲ ಒಂದು ದಿನ ಬಾಗಿಲು ದಾಟುವ ಬಿಡುಗಡೆಯ ಭಾಗ್ಯ ದೊರೆಯುತ್ತದೆ ಎಂಬ ಉತ್ಕಟ ಭಾವವನ್ನು ಹೆಣ್ಣಾದವಳು ಪ್ರಕಟಿಸುತ್ತಾಳೆ. ಇಡೀ ಪುರುಷ ಕೇಂದ್ರಿತ ಸಮಾಜವನ್ನು ಕುರಿತು 'ನೀನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ನನ್ನ ಬಿಟ್ಟು ನಿನಗೆ ಬಾಳ್ವೆಯಿಲ್ಲ, ನಮ್ಮಿಬ್ಬರ ಪರಸ್ಪರ ಸಾಂಗತ್ಯದಿಂದ ಮಾತ್ರ ಬಾಳು ಕಟ್ಟಿಕೊಳ್ಳಲು ಸಾಧ್ಯ ಏಕೆಂದರೆ ಗಂಡಿನೊಳಗಿನ ಹೆಣ್ತನ, ಹೆಣ್ಣಿನೊಳಗಿನ ಗಂಡುತನ ಈ ಎರಡೂ ಸಂಗತಿಗಳು ಅಂತಿಮ ಸತ್ಯವಾಗಿದ್ದು, ಕಾಲಚಕ್ರದ ಉರುಳುವಿಕೆಯಲ್ಲಿ ಇದು ಸಾಕ್ಷಾತ್ಕಾರಗೊಳ್ಳಲೇಬೇಕು' ಎನ್ನುವುದು ಇಡೀ ಕವಿತೆಯ ಭಾವಾರ್ಥವಾಗಿದೆ.

‘ಅಡ್ಡಾದಿಡ್ಡಿ ದಿಕ್ಕು ಕರೆದೆಡೆಗೆ
ತಪ್ಪು ಹೆಜ್ಜೆ ಇಡುವ ಕಾಲು
ಮಡಕೆಯೆಲ್ಲೋ ದಾರಿಯಲ್ಲೋ
ಇವನೆಲ್ಲೋ ಎಲ್ಲಾ ದಿಕ್ಕಾಪಾಲು
ಯಾರ ಸೃಷ್ಟಿ ಈ
ಮಡಕೆ ಒಡೆವ ಆಟ?
ಕಣ್‌ಕಟ್ಟಿ ದಾರಿ ತಡಕುತ್ತಾ
ಗುರಿಗಾಗಿ ಹುಡುಕಾಟ
ತಪ್ಪುತ್ತಲೇ ಇರುವ ಹಾದಿಯಲ್ಲಿ
ನಿರಂತರ ಅಲೆದಾಟ!”[೨೪] (ಮಡಕೆ ಒಡೆವ ಆಟ)

ಈ ಮೇಲಿನ ಸಾಲುಗಳನ್ನು ‘ಮಡಕೆ ಒಡೆವ ಆಟ’ ಎಂಬ ಕವಿತೆಯಿಂದ ತೆಗೆದುಕೊಳ್ಳಲಾಗಿದೆ. ‘ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ’ ಎಂಬ ಮನುಧರ್ಮಶಾಸ್ತ್ರಕ್ಕೆ ಕಟ್ಟುಬಿದ್ದ ಸಮಾಜವು, ಮಹಿಳೆಯ ಕಣ್ಣಿಗೆ ಬಟ್ಟೆ ಕಟ್ಟಿ, ಕತ್ತಲಲ್ಲಿ ಇರುವಂತೆ ಮಾಡಿದವರು ಯಾರು? ಎಂಬುದಾಗಿ ಪ್ರಶ್ನಿಸಲಾಗಿದೆ. ಗುರಿಯನ್ನು ಮುಟ್ಟಲು ದಾರಿ ಕಾಣಬೇಕು. ಆದರೆ, ಇಲ್ಲಿ ದಾರಿ ಕಾಣದಂತೆ ಮಹಿಳೆಗೆ ಕಣ್ಣಿಗೆ ಬಟ್ಟೆ ಕಟ್ಟಲಾಗಿದೆ. ಹೀಗಿರುವಾಗ, ಅವಳು ಗುರಿಯನ್ನು ಮುಟ್ಟುವುದಾದರೂ ಹೇಗೆ? ಎನ್ನುವುದು ಇಡೀ ಸ್ತ್ರೀ ಕುಲದ ಮುಂದಿರುವ ಪ್ರಶ್ನೆಯಾಗಿದೆ. ಈ ರೀತಿಯ ವ್ಯವಸ್ಥೆಯ ನಿರ್ಮಾಣದಲ್ಲಿ ಯಾರ ಷಡ್ಯಂತರ ಅಡಗಿದೆ? ಎಂಬುದಾಗಿ ಕವಿತೆ ಆಗ್ರಹಿಸುತ್ತದೆ. ಪುರುಷ ಕೇಂದ್ರಿತ ಸಮಾಜವು ಮಹಿಳೆಯಾದವಳು ಈ ‘ಮಡಕೆ ಒಡೆವ’ ಆಟದಲ್ಲಿ ಯಶಸ್ವಿಯಾಗಬಾರದು ಎಂಬ ಆಲೋಚನೆಯಿಂದ ಈ ಸೂತ್ರವನ್ನು ರೂಪಿಸಿದೆ. ಇಲ್ಲಿ ಬರುವ ಮಡಕೆ ಒಡೆವ ಆಟ ಕೇವಲ ಒಂದು ಪ್ರತೀಕವಾಗಿದ್ದು, ಸಂಪ್ರದಾಯಬದ್ಧ ಮನಸ್ಸುಗಳು ಹೆಣ್ಣಿನ ಸುತ್ತ ನಿರ್ಮಿಸಿರುವ ನಿರ್ಬಂಧಗಳ ಕೋಟೆಯನ್ನು ಇದು ಧ್ವನಿಸುತ್ತದೆ. ಇಲ್ಲಿ ಕೈಗೆ ಕೋಲು ಕೊಟ್ಟಿರುವುದು ಕೇವಲ ನೆಪಮಾತ್ರಕ್ಕೆ ಎನ್ನುವುದು ವೇದ್ಯವಾಗುತ್ತದೆ.

‘ಅವ್ವ ಏಣಿಗಳ ಕಥೆ’ ಕವಿತೆಯಲ್ಲಿ ಬರುವ ಧ್ವನಿಪೂರ್ಣ ಸಾಲುಗಳಾದ

“ಅಟ ಏಣಿಗಳ ಅದೇ ಹಳೇ ಕಥೆ
ಅಟ್ಟವೇರಲು ಏಣಿ ಏಣಿ ಕೊನೆಗೆ ಅಟ್ಟವಂತೆ!
. . . . . . . . . . . . . . . . . . . . . . . .
ಅವ್ವದ ಮುಂದೆ ಏಣಿ ಸದಾ ಸೊನ್ನೆ
ಇಂದೆಂಬ ಗುರಿ ಸೇರಿದ ಮೇಲೆ
ದಾರಿ ಕಳೆದು ಹೋದ ನೆನ್ನೆ
ಅಟ್ಟ ಏಣಿಗಳ ಅದೇ ಹಳೇ ಕಥೆ
ಅಟ್ಟವೇರಿದವರು ಏಣಿ ಒದ್ದರಂತೆ!”[೨೫] (ಅವ್ವ ಏಣಿಗಳ ಕಥೆ)

ಎನ್ನುವಲ್ಲಿ ಮಹಿಳೆಯನ್ನು ಬಳಸಿಕೊಂಡು ಕೊನೆಗೆ ಅವಳನ್ನು ಮೂಲೆಗುಂಪು ಮಾಡಿದ ಗಂಡಿನ ಮಾನಸಿಕ ಧೋರಣೆಯನ್ನು ಕವಿತೆಯು ಸಾರಿ ಹೇಳುತ್ತದೆ. ಅಂದರೆ, ಇಲ್ಲಿ ಬರುವ ಏಣಿ ವ್ಯವಸ್ಥೆಯ ಆಧಾರ ಸ್ತಂಭದ ಪ್ರತೀಕವಾಗಿದೆ. ಇಲ್ಲಿನ ಏಣಿ ಸ್ತ್ರೀಯನ್ನು ಪ್ರತಿನಿಧಿಸುತ್ತದೆ. ಸಂಸಾರವನ್ನು ಮಾಡಲು, ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳಲು, ವಂಶೋದ್ಧಾರಕರನ್ನು ಪಡೆಯಲು, ಸಂಸಾರದ ನೊಗವನ್ನು ಹೊರಲು ಮಹಿಳೆಯಾದವಳು ಒಂದು ಅನಿವಾರ್ಯ ಶಕ್ತಿಯಾಗಿ ಪಾತ್ರನಿರ್ವಹಿಸುತ್ತಾಳೆ. ಆದರೆ ಈ ಮಹೋನ್ನತ ಪಾತ್ರ ನಿರ್ವಹಿಸುವ ಮಹಿಳೆಯನ್ನೇ ಸಮಾಜ ಕೊನೆಗೊಮ್ಮೆ ಮೂಲೆಗುಂಪು ಮಾಡುವ ಪರಿಯನ್ನು ರೂಪಾ ಅವರು ಅತ್ಯಂತ ಸಮರ್ಥವಾಗಿ ಈ ಪದ್ಯದ ಮುಖೇನ ಕಟ್ಟಿಕೊಡುತ್ತಾರೆ.

ರೂಪ ಹಾಸನ ಅವರು 'ಒಂದಿಷ್ಟು ಹಸಿಮಣ್ಣು', 'ಬಾಗಿಲಚೆಯ ಮೌನ', ಸಂಕಲನಗಳಲ್ಲಿ ಸ್ತ್ರೀ ಅಸ್ಮಿತೆಯನ್ನು, ಅವಳ ಬದುಕಿನ ಆಳ – ಅಗಲಗಳನ್ನು, ಜೀವನದ ಅನನ್ಯತೆಯನ್ನು, ನೋವು – ತುಡಿತ – ಮಿಡಿತಗಳನ್ನು ಅಭಿವ್ಯಕ್ತ ಮಾಡಿರುವಂತೆ 'ಕಡಲಿಗೆಷ್ಟೊಂದು ಬಾಗಿಲು' ಕೃತಿಯಲ್ಲೂ ಕೂಡ ಶ್ರೀ ಸಾಮಾನ್ಯರ ಹಾಗೂ ಸ್ತ್ರೀ ಸಾಮಾನ್ಯರ ಬದುಕಿನ ಒಳತೋಟಿಗಳನ್ನು, ಒಳನೋಟಗಳನ್ನು ಕಟ್ಟಿಕೊಡುವಲ್ಲಿ ಅವರ ಬಾಳಿನ ಸಾಧ್ಯತೆಗಳನ್ನು ವಿಸ್ತರಿಸುವಲ್ಲಿ, ವಿಭಿನ್ನವಾದ ಅರ್ಥವಲಯವನ್ನು ನಿರ್ಮಿಸುವಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ. ನಿಗೂಢಗಳಿಂದ ಆಚೆ ಬಂದು, ವಿಸ್ಮಯಗಳನ್ನು ದಾಟಿ, ಕ್ಲೀಷೆಗಳನ್ನು ಕೊಡವಿಕೊಂಡು, ವಾಸ್ತವಿಕ ತಳಹದಿಯ ಮೇಲೆ ಸ್ತ್ರೀಕುಲದ ಅಂತರಂಗವನ್ನು ಇಲ್ಲಿ ಬರುವ ಅನೇಕ ಕವಿತೆಗಳ ಮುಖೇನ ಅನಾವರಣಗೊಳಿಸಿದ್ದಾರೆ.

'ಅಮ್ಮನಾಗುವುದೆಂದರೆ' ಎಂಬ ಕವಿತೆಯು ಸ್ತ್ರೀ ಮನಸ್ಸಿನ ಪರಿಪಕ್ವತೆಯನ್ನು ಸಾದರಪಡಿಸುತ್ತದೆ. ಅಮ್ಮನಾಗುವುದು ಒಂದು ಯಃಕಶ್ಚಿತ್ ಘಟನೆಯಲ್ಲ. ಹೇಗೆ ಬೆಣ್ಣೆ ಕುದಿಗೊಂಡು, ತುಪ್ಪವಾಗಿ, ಘಮಲು ಬೀರುತ್ತದೆಯೋ, ಪರಿಮಳ ಸೂಸುತ್ತದೆಯೋ, ಅದೇ ರೀತಿ ಹೆಣ್ಣಿನ ಮನಸ್ಸು ಮಾಗಬೇಕು. ಮಾಗಿದಾಗ ಮಾತ್ರ ಮನಸ್ಸು ಅರಳುತ್ತದೆ. ಹೃದಯವಿಕಾಸಗೊಳ್ಳುತ್ತದೆ. ಜೀವನದಲ್ಲಿ ಸುಭಗತೆ ಉಂಟಾಗುತ್ತದೆ ಎಂಬುದಾಗಿ ಈ ಕವಿತೆಯ ಸಾಲುಗಳು 'ಹೆಣ್ಣೆಂದರೆ ಕೇವಲ ಹೆಣ್ಣಲ್ಲ, ನೂರಾರು ಭಾವಗಳ, ಸಾವಿರದ ಶಕ್ತಿಗಳ ಆಗರವಾಗಿದ್ದಾಳೆ' ಎನ್ನುವುದು ಇಲ್ಲಿನ ಮುಖ್ಯ ಮನೋಧೋರಣೆಯಾಗಿದೆ. 'ಬೆಣ್ಣೆ ಕಾಯಿಸಿ ತುಪ್ಪ ಮಾಡುವುದು ಹೇಗೆ ಕಲಿಗಾರಿಕೆಯೋ, ಹೆಣ್ಣಿನ ಬಾಳು ಕೂಡ ಒಂದು ಮಹೋನ್ನತ ಶಿಲ್ಪದಂತೆ ಎನ್ನಲಾಗಿದೆ. ಈ ಕವಿತೆಯಲ್ಲಿ ಅಮ್ಮನಿಂದ ಮಗಳಿಗೆ ಹೆಣ್ಣಾಗುವ ಬಗೆಯನ್ನು ಕುರಿತಂತೆ ಬೋಧನೆ ನಡೆಯುತ್ತದೆ. ಇದಕ್ಕೆ ಪ್ರತಿಮಾತ್ಮಕವಾಗಿ 'ಬೆಣ್ಣೆ ಕಾಯಿಸಿ ತುಪ್ಪ ಮಾಡುವ ಕ್ರಿಯೆ'ಯನ್ನು ಬಳಸಿಕೊಳ್ಳಲಾಗಿದೆ. ಕೆಳಗೆ ಪ್ರಸ್ತಾಪ ಮಾಡಿರುವ ಸಾಲುಗಳು ಮೇಲಿನ ಸಂಗತಿಗಳಿಗೆ ಅಥವಾ ವಿವರಣೆಗೆ ಪೂರಕವಾಗಿವೆ.

"ಯಾವುದು ನಿಜದ ಹದ?
ಪಕ್ವತೆಯ ಗರಿಷ್ಠ ಬಿಂದು
ನಿರ್ಧಾರದ ಹೊಸ್ತಿಲಲ್ಲಿ ತಪಿಸುವ ತಾಪ

ಕಳಿಯುವಿಕೆಯ ಹುಡುಕಾಟದ ತಪ
ಸಿದ್ಧಿಸಿದಂತೆಲ್ಲಾ, ಬೆಣ್ಣೆ ಉಕ್ಕುವುದಿಲ್ಲ
ಮಾಗುವ ಸದ್ದಿಗೆ ಧ್ಯಾನಿಸಿ
ಸ್ಥಿರಗೊಳ್ಳುತ್ತದೆ ಮನ ಕರಟುವುದಿಲ್ಲ
ಹಸುಕಲಾಗುವುದಿಲ್ಲ. ಸದಾ ಹದ ತುಪ್ಪ
ಅಮ್ಮನಾಗುವುದೆಂದರೆ . . . . . ಹೀಗೆ"[೨೧] (ಅಮ್ಮನಾಗುವುದೆಂದರೆ)

'ಹೇಳದೆ ಉಳಿದದ್ದು' ಎಂಬ ಕವಿತೆಯು ಹೆಸರಿಗೆ ತಕ್ಕಂತೆ ಹೆಣ್ಣಿನ ಒಳತೋಟಿಯನ್ನು ಹೊರಚೆಲ್ಲುತ್ತದೆ. ಪ್ರಕೃತಿಯ ಸಂಗತಿಗಳನ್ನು ಅತ್ಯಂತ ಸಮರ್ಥವಾಗಿ ವಿನ್ಯಾಸಗೊಳಿಸಿಕೊಂಡು ಈ ಕವಿತೆಯನ್ನು ಕಟ್ಟಲಾಗಿದೆ. ಒಂದಿಷ್ಟು ಅಚ್ಚರಿ, ಮತ್ತಷ್ಟು ಎಚ್ಚರ, ಯಾವುದನ್ನೂ ಹೇಳಿಕೊಳ್ಳಲಾಗದ ಸಂಕಟ, ಹೇಳಿಕೊಂಡರೂ ಈಡೇರದ ಬಯಕೆ, ಮೂಡದ ಮುಗುಳು ಇತ್ಯಾದಿ ಮಾನಸಿಕ ಪಲ್ಲಟಗಳನ್ನು ಕವಿತೆಯ ಸಾಲುಗಳು ಪರಿಣಾಮಕಾರಿಯಾಗಿ ಹಿಡಿದಿಡುತ್ತವೆ. 'ಹೇಳದೇ ಉಳಿದದ್ದು' ಎಂಬ ಹೆಸರೇ ಹೇಳುವುದು ಸಾಕಷ್ಟಿದೆ. ಹೇಳಿಕೊಂಡರೂ ಪ್ರಯೋಜನವಿಲ್ಲ ಎಂಬಿತ್ಯಾದಿ ಅರ್ಥಸಾಧ್ಯತೆಗಳನ್ನು ಇಲ್ಲಿ ಗ್ರಹಿಸಬಹುದಾಗಿದೆ. ಕವಿತೆಯ ಸಾಲುಗಳೇ ಹೇಳುವಂತೆ

"ಒಂದು ಎಚ್ಚರ
ಮತ್ತೊಂದು ಅಚ್ಚರಿ
ನಡುವಿನಾ ಅಗಾಧ ಕಡಲು
ಒಂದಿಷ್ಟು ನೋವು
ಮತ್ತಿಷ್ಟು ಕಂಬನಿ
ಎಂದಿಗ ಅರಳದ ಮುಗಳು"[೨೨] (ಹೇಳದೇ ಉಳಿದದ್ದು)

ನಿತ್ಯವೂ ಮರುಹುಟ್ಟು ಪಡೆಯುವ ಹೆಣ್ಣಿನ ಜನ್ಮವನ್ನು, ಸಂಕಷ್ಟಗಳಿಗೆ ತನ್ನನ್ನು ತಾನು ಒಡ್ಡಿಕೊಳ್ಳುವ ಪರಿಯನ್ನು, ಕೊಳೆಯನ್ನು ತೊಳೆದು ಹೊಸತನ್ನು ಕಟ್ಟುವ ಹೆಣ್ಣಿನ ರೀತಿಯನ್ನು 'ಮಸಿಬಟ್ಟೆ ಎಂಬೋಳು' ಕವನದ ಮುಖೇನ ಅತ್ಯಂತ ಧ್ವನಿಪೂರ್ಣವಾಗಿ ಚಿತ್ರಿಸಲಾಗಿದೆ. ಇಲ್ಲಿ ಮಸಿಬಟ್ಟೆ ಒಂದು ರೂಪಕವಾಗಿದ್ದು, ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಒಳಗೆ ಮತ್ತು ಹೊರಗೆ ಹೆಣ್ಣು ನಿರ್ವಹಿಸುತ್ತಿರುವ ವಿಭಿನ್ನ ಪಾತ್ರವನ್ನು ವಿವರಿಸಲು ಬಳಸಿಕೊಳ್ಳಲಾಗಿದೆ. ಏನೇ ಇದ್ದರು 'ಪವಿತ್ರತೆಯು ತನ್ನ ಆಂತರ್ಯದ ಶಕ್ತಿ' ಎಂಬ ಅರಿವು ಅವಳಲ್ಲಿ ಇದ್ದೇ ಇದೆ. ಈ ವಿವರಣೆಯನ್ನು ಸಮರ್ಥಿಸಲು ಕವಿತೆಯ ಸಾಲುಗಳನ್ನು ಇಲ್ಲಿ ನೀಡಲಾಗಿದೆ.

"ಉಕ್ಕಿದ್ದು ಸೀಟಲು
ಸಿಡಿದಿದ್ದು ಒರೆಸಲು
ಬಿಸಿಬಿಸಿಯ ಪಾತ್ರೆ ಪಡಗ
ಒಲೆಯಿಂದ ಇಳುಕಲು

ಸದ್ದಿಲ್ಲದೇ ಸಹಕರಿಸುವವಳು
ಸದ್ದುಗಳ ಒಳಗೇ ಅಡಗಿಸಿಟ್ಟವಳು
ಚಿಂದಿಯಡಿಯಲೇ ನಕ್ಕವಳು ಅತ್ತವಳು!"[೨೮] (ಮಸಿಬಟ್ಟೆ ಎಂಬೋಳು)

ಖ್ಯಾತ ವಿಮರ್ಶಕರು ಹಾಗೂ ಸಂಸ್ಕೃತಿ ಚಿಂತಕರೂ ಆಗಿರುವ ಬರಗೂರು ರಾಮಚಂದ್ರಪ್ಪನವರು 'ಕಡಲಿಗೆಷ್ಟೊಂದು ಬಾಗಿಲು' ಕೃತಿಗೆ 'ಕಡಲ ಒಡಲ ಹೊಕ್ಕು' ಎಂಬ ಶೀರ್ಷಿಕೆಯಡಿಯಲ್ಲಿ ಮುನ್ನುಡಿ ಬರೆಯುತ್ತಾ 'ತೋರ ಬೆರಳಿಗೊಂದು ಕಣ್ಣು' ಕವಿತೆಯನ್ನು ಕುರಿತಂತೆ "ಬಲದಾದ ಸನ್ನಿವೇಶದ ಕ್ರೂರ ಪರಿಣಾಮಗಳನ್ನು ಗ್ರಹಿಸುತ್ತಲೇ ಅದನ್ನು ಮೀರಿ 'ನಿರ್ಭಯದ ಪ್ರಖರ ಕಣ್ಣು, 'ಮೂರನೆಯ ಕಣ್ಣು' ತಮ್ಮ ತೋರು ಬೆರಳಿಗೆದೆಯೆಂದು ಆತ್ಮವಿಶ್ವಾಸದಿಂದ ಹೇಳುವ ಸ್ತ್ರೀ ಸಮುದಾಯದ ದಿಟ್ಟ ದನಿಯಂತೆ ಕಾಣುವ ಕವಿತೆಯಿದು. ಇರುವ ಎರಡು ಕಣ್ಣುಗಳಿಗೆ ಸಂಪ್ರದಾಯದ 'ಕಣ್ಕಾಪು ಬಿಗಿದು' ಎಷ್ಟೋ ಕಾಲವಾಗಿದ್ದನ್ನು, ಅರಿಯುತ್ತಲೇ ತನ್ನ ದಾರಿ ತಾನೇ ಕಂಡುಕೊಳ್ಳುವ ಸಂಕಲ್ಪ ಈ ಕವಿತೆಯಲ್ಲಿದೆ"[೨೯] ಹೀಗೆ ಅಭಿಪ್ರಾಯಪಡುತ್ತಾರೆ. ಎರಡು ಕಣ್ಣುಗಳಿರುವುದು ಮುನ್ನೋಟವನ್ನು ಗ್ರಹಿಸಲು. ಆದರೆ ಆ ಕಣ್ಣುಗಳಿಗೆ ಕಣ್ಕಾಪು ಬಿಗಿದು ಅದೆಷ್ಟೋ ಶತಮಾನಗಳೇ ಸಂದಿವೆ. ತಮ್ಮ ಮುಂದಿನ ಶೋಷಣೆಯನ್ನು, ತನ್ನ ಮೇಲೆರಗಿ ಬರುವ ಕ್ರೌರ್ಯವನ್ನು ಎದುರಿಸಲಾಗದ ರೀತಿಯಲ್ಲಿ ಕಣ್ಣಿಗೆ ಕಣ್ಕಾಪು ಬಿಗಿಯಲಾಗಿದೆ. ಅಂದರೆ ಹೆಣ್ಣನ್ನು ತನ್ನ ಮನಬಂದಂತೆ ಬಳಸಿಕೊಳ್ಳಲಾಗುತ್ತದೆ ಎಂಬ ಭಾವ ಇಲ್ಲಿ ಧ್ವನಿತಗೊಂಡಿದೆ ಎನ್ನುವುದು ಒಟ್ಟಾರೆ ಕವಿತೆಯ ಅರ್ಥವಲಯವಾಗಿದೆ.

'ಕಡಲಿಗೆಷ್ಟೊಂದು ಬಾಗಿಲು' ಕೃತಿಯಲ್ಲಿ ಬರುವ 'ಅಕಾರಣ' ಕವಿತೆಯು ಗಂಡು, ಹೆಣ್ಣಿಗೆ ಹಾಕಿರುವ ಸೀಮಾ ಪ್ರಪಂಚವನ್ನು ಕುರಿತು ವಿವರಿಸುತ್ತದೆ. ಇಳೆ, ಮಳೆ, ಮುಗಿಲುಗಳ ಸಂಬಂಧವನ್ನು ಸಾಕ್ಷಾತ್ಕಾರಗೊಳಿಸುತ್ತಲೇ, ಹೆಣ್ಣಿನ ಬಸುತರತನವನ್ನು ಮನ ಮಿಡಿಯುವಂತೆ ಕೆತ್ತಲಾಗಿದೆ. ಪದ್ಯದಲ್ಲೇ ಬರುವಂತೆ 'ಶಿಲ್ಪಿ ಕಡಿದಂತೆ ಶಿಲ್ಪಧಾಕಾರ' ಎಂಬ ಮಾತು ಗಂಡಿನ ಅಂಕುಶದಲ್ಲಿ ಬದುಕುತ್ತಿರುವ ಹೆಣ್ಣಿನ ಬವಣೆಯನ್ನು ಚಿತ್ರಿಸುತ್ತದೆ. ಈ ಕವಿತೆಯನ್ನು ಕುರಿತಂತೆ ಬರಗೂರು ರಾಮಚಂದ್ರಪ್ಪನವನು ಈ ಕೆಳಗಿನಂತೆ ಅಭಿಪ್ರಾಯ ಪಡುತ್ತಾರೆ.

"ಬಸುರಿನ ಮುಗಿಲು ಹಿಂಸೆಯನನುಭವಿಸುತ್ತಲೇ ......... ವರುಣನ ಹಡೆದು ಬಿಡಬೇಕು ಎಂಬ ಸಾಲುಗಳಲ್ಲಿರುವ ಹಿಂಸೆಯ ಪ್ರಸ್ತಾಪ ಮುಗಿಲಿಗೂ ಅನ್ವಯಿಸುತ್ತದೆ. ಮಹಿಳೆಗೂ ಅನ್ವಯಿಸುತ್ತದೆ".[೩೦] ಹೀಗೆ ರೂಪ ಹಾಸನ ಅವರು 'ಕಡಲಿಗೆಷ್ಟೊಂದು ಬಾಗಿಲು' ಕೃತಿಯಲ್ಲಿ ಸ್ತ್ರೀ ಬದುಕಿನ ವಿಭಿನ್ನ ಆಯಾಮಗಳನ್ನು, ನೋವು – ಸಂಕಷ್ಟಗಳನ್ನು, ಹೆಣ್ಣಿಗೆ ಕಣ್ಕಾಪು ಬಿಗಿದಿರುವ ಪುರುಷ ಕೇಂದ್ರಿತ ವ್ಯವಸ್ಥೆಯ ಷಡ್ಯಂತರಗಳನ್ನು, ಭೂಮಿ – ಮುಗಿಲು – ಮಹಿಳೆ ಇವುಗಳ ನಡುವಿನ ಕ್ರಿಯಾಪರಂಪರೆಯನ್ನು ಅತ್ಯಂತ ಅಚ್ಚುಕಟ್ಟಾಗಿ ಓದುಗರಿಗೆ ಹೊಸ ಭರವಸೆ ಮೂಡಿಸುವ ರೀತಿಯಲ್ಲಿ ವಿಮರ್ಶಕರ ಕಣ್ಣಿಗೆ ವಿವಿಧ

ಅರ್ಥಸಾಧ್ಯತೆಗಳು ಗೋಚರವಾಗುವ ಧಾಟಿಯಲ್ಲಿ ಹಲವಾರು ಕವಿತೆಗಳನ್ನು ತಮ್ಮ ಸೃಜನಶೀಲ ದೃಷ್ಟಿಕೋನದೊಂದಿಗೆ ಕೃತಿಸಿದ್ದಾರೆ. ಒಟ್ಟಾರೆ, 'ಕಡಲಿಗೆಷ್ಟೊಂದು ಬಾಗಿಲು' ಕೃತಿಯ ಪ್ರಾಮುಖ್ಯತೆಯನ್ನು ಬರಗೂರು ರಾಮಚಂದ್ರಪ್ಪನವರ ಮಾತುಗಳಲ್ಲಿ ಪೂರ್ಣಗೊಳಿಸಲಾಗಿದೆ.

"ರೂಪ ಅವರ ಕಾವ್ಯವು ನಿಗೂಢಗಳ ಗೂಡಿನ ಗುಬ್ಬಚ್ಚಿಯಾಗದೆ ಹೊರಬಂದು ಹಾರಾಡತೊಡಗಿದೆ. ವಿಸ್ಮಯಗಳಲ್ಲಿ ಹೂತು ಹೋಗದೆ ಹುಡುಕಾಟದ ಒಳಗಿನಿಂದಲೇ ಹೊಸದಿಕ್ಕು ದಕ್ಕಿಸಿಕೊಂಡಿದೆ. ವೈಯಕ್ತಿಕತೆ ಮತ್ತು ಸಾಮಾಜಿಕತೆಗಳನ್ನು ಬೆಸೆವ ಹೊಸ ಹೊಳಪು ಪಡೆದಿದೆ. ಹಿಂದಿನ ಸಂಕಲನಗಳಲ್ಲಿ ವಿಸ್ಮಯ, ಪ್ರಶ್ನೆ ಮತ್ತು ನಿಗೂಢದ ನೆಲೆಗಳಲ್ಲಿ ಮಾತ್ರ ನಿಲ್ಲುತ್ತಿದ್ದ ಇವರ ಪ್ರಮುಖ ಕವಿತೆಗಳು ಈ ಸಂಕಲನದಲ್ಲಿ ಹೊಸ ಹುಟ್ಟು ಪಡೆದಿವೆ ಮತ್ತು ಹೊಸ ವಸ್ತುವಿನ ಕವಿತೆಗಳು ಹುಟ್ಟಿವೆ. ಯಾರದೇ ಸಂಕಲನದಲ್ಲಿರುವಂತೆ ಇಲ್ಲಿಯೂ ಕೆಲವು ಸುಮಾರಾದ ಕವಿತೆಗಳಿವೆ. ಆದರೆ ಬಹುಪಾಲು ಕವಿತೆಗಳು ಅರ್ಥಪೂರ್ಣ ಅಭಿವ್ಯಕ್ತಿಯಿಂದ ಕಾವ್ಯ ಗೌರವವನ್ನು ಹೆಚ್ಚಿಸಿವೆ. ಗಂಭೀರ ಚರ್ಚೆಯನ್ನು ಆಹ್ವಾನಿಸುತ್ತದೆ.

ಒಂದೇ ಮಾತಿನಲ್ಲಿ ಹೇಳುವುದಾದರೆ 'ಕಡಲಿಗೆಷ್ಟೊಂದು ಬಾಗಿಲು' ಸಂಕಲನದ ಮೂಲಕ ರೂಪ ಹಾಸನ ಅವರು ಈ ಕಾಲದ ಒಬ್ಬ ಮಹತ್ವದ ಕವಿಯಾಗಿ ಹೊರಹೊಮ್ಮಿದ್ದಾರೆ"[೩೧]

**ಕೊನೆಟಿಪ್ಪಣಿಗಳು :**

೧. ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ, ಸಂ., ಸಿ.ಬಿ. ಹೊನ್ನಯ್ಯ, ಪುಟ ಸಂಖ್ಯೆ – ೧೫೨, ಜೈಭೀಮ್ ಪ್ರಕಾಶನ, ಬೆಂಗಳೂರು.

೨. ಬಾಗಿಲು ತೆರೆಯುವ ಮುನ್ನ ಎಂಬ ಶೀರ್ಷಿಕೆಯಡಿ ಬಾಗಿಲಾಚೆಯ ಮೌನ ಎಂಬ ಕೃತಿಯಲ್ಲಿ ಈ ಹೇಳಿಕೆ ಪ್ರಸ್ತಾಪಗೊಂಡಿದೆ.

೩. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯದ ಪುನರ್ ಮೌಲ್ಯೀಕರಣ, ಭಾಗ – ೩, ಡಾ. ವಿಜಯದಬ್ಬೆಯವರ ಆಶಯ ಲೇಖನದಿಂದ, ಪುಟ ಸಂಖ್ಯೆ – ೨, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯದ ಪುನರ್ ಮೌಲ್ಯೀಕರಣ, ಭಾಗ – ೩, ಡಾ. ವಿಜಯದಬ್ಬೆಯವರ ಆಶಯ ಲೇಖನದಿಂದ, ಪುಟ ಸಂಖ್ಯೆ – ೩, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಡಾ. ಎನ್. ಗಾಯಿತ್ರಿ ನವಾಡ, ಪುಟ. ೧೦, ಸಿರಿ ಪ್ರಕಾಶನ, ಹೊಸಕೋಟೆ, ಉಡುಪಿ

೬. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ ಸೃಜನಶೀಲ ಪ್ರಕ್ರಿಯೆ, ನೇಮಿಚಂದ್ರ, ಪುಟ ಸಂಖ್ಯೆ – ೧೫೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು (೧೯೯೩)

೭. ಒಂದಿಷ್ಟು ಹಸಿ ಮಣ್ಣು, ರೂಪ ಹಾಸನ, ಪುಟ ಸಂಖ್ಯೆ–೬೧, ಸಿರಿವರ ಪ್ರಕಾಶನ, ಬೆಂಗಳೂರು, ೨೦೦೦.

೮. ಗಿಡವೆಂದು ತಿಳಿದೆಯೋ/ಹೆಣ್ಣು ಜನ್ಮದ ಒಡಲ/ಫಲಗಳನು ಮನಬಂದಂತೆ/ಸೃಜಿಸುವುದಕ್ಕೆ – ಬೆಳಗೆರೆ ಜಾನಕಮ್ಮರವರ ಒಂದು ಕವಿತೆಯಿಂದ.

೯. ಒಂದಿಷ್ಟು ಹಸಿಮಣ್ಣು, ರೂಪಹಾಸನ, ಪುಟ ಸಂಖ್ಯೆ ೬, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦)

೧೦. ಒಂದಿಷ್ಟು ಹಸಿಮಣ್ಣು, ರೂಪಹಾಸನ, ಪುಟ ಸಂಖ್ಯೆ ೮, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೧. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ ೭೧, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೨. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ ೩೧, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೩. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೬೩, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೪. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೬೭, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೫. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೪೬, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೬. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೧೩, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೭. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೧೩, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೮. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೨೯, ಸಿರಿವನ ಪ್ರಕಾಶನ, ಬೆಂಗಳೂರು (೨೦೦೦).

೧೯. ಪ್ರೊ. ಸ. ಉಷಾ, ಅರಸೀಕೆರೆ ('ಒಂದಿಷ್ಟು ಹಸಿಮಣ್ಣು' ಮುನ್ನುಡಿಯಿಂದ), ಡಾ. ವಸಂತಕುಮಾರ್ ಪೆರ್ಲ ('ಒಂದಿಷ್ಟು ಹಸಿಮಣ್ಣು' ಬೆನ್ನುಡಿಯಿಂದ), ಎಂ.ಆರ್. ಭಗವತಿ, ಬೆಂಗಳೂರು (ಸಂಚಯ, ಪುಸ್ತಕ ಪರಿಚಯ ವಿಭಾಗ), ಚಂದ್ರಚೂಡ್ ಹಾಸನ (ಜನಮಿತ್ರ, ಪುಸ್ತಕ ವಿಮರ್ಶೆ ವಿಭಾಗ), ಪ್ರಹ್ಲಾದ ಅಗಸನಕಟ್ಟೆ, ಹುಬ್ಬಳ್ಳಿ, ಡಾ. ಸರಜೂ ಕಾಟ್ಕರ್, ಬೆಳಗಾವಿ, ಡಾ. ಗುರುಲಿಂಗ ಕಾಪಸೆ, ಧಾರವಾಡ, ಜರಗನಹಳ್ಳಿ ಶಿವಶಂಕರ್, ಬೆಂಗಳೂರು (ರೂಪ ಹಾಸನ ಅವರ 'ಬಾಗಿಲಾಚೆಯ ಮೌನ' ಕೃತಿಯ ಕೊನೆಯಲ್ಲಿ ಈ ಎಲ್ಲಾ ಲೇಖಕರು/ವಿಮರ್ಶಕರು ರೂಪಾ ಅವರ 'ಒಂದಿಷ್ಟು ಹಸಿಮಣ್ಣು' ಸಂಕಲನಕ್ಕೆ ನೀಡಿರುವ ಪ್ರತಿಕ್ರಿಯೆಗಳನ್ನು ನಿಬಂಧದ ಪುಟ ಸಂಖ್ಯೆ ೨೦ – ರಲ್ಲಿ ನಮೂದಿಸಲಾಗಿದೆ).

೨೦. 'ಬಾಗಿಲಾಚೆಯ ಮೌನ – ರೂಪ ಹಾಸನ, ಪುಟ ಸಂಖ್ಯೆ – ೫, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೨೧. ಬಾಗಿಲಾಚೆಯ ಮೌನ – ರೂಪ ಹಾಸನ, ಪುಟ ಸಂಖ್ಯೆ – ೮, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫)

೨೨. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ ಸಂಖ್ಯೆ – ೧೧, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೨೩. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ ಸಂಖ್ಯೆ – ೧೭, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೨೪. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ ಸಂಖ್ಯೆ – ೬೪, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೨೫. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ ಸಂಖ್ಯೆ – ೪೬, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೨೬. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ ಸಂಖ್ಯೆ – ೨೮, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೧೦).

೨೭. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ ಸಂಖ್ಯೆ ೩೭, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೧೦).

೨೮. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ ಸಂಖ್ಯೆ – ೭೪, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೧೦).

೨೯. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, (ಕಡಲಿಗೆಷ್ಟೊಂದು ಬಾಗಿಲು, ಮುನ್ನುಡಿಯಿಂದ)

೩೦. ಕಡಲಿಗೆಷ್ಟೊಂದು ಬಾಗಿಲು ಕೃತಿಯ ಮುನ್ನುಡಿಯಿಂದ

೩೧. ಕಡಲಿಗೆಷ್ಟೊಂದು ಬಾಗಿಲು ಕೃತಿಯ ಮುನ್ನುಡಿಯ ಉಪಸಂಹಾರದಿಂದ

ಅಧ್ಯಾಯ – ೩

## ರೂಪ ಹಾಸನ ಅವರ ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆ

'ಮಾನವ ಸಂಘಜೀವಿ' (ಅರಿಸ್ಟಾಟಲ್). ಅವನು ಒಂಟಿಯಾಗಿ ಜೀವಿಸಲಾರ. 'ದೇವರು ಮಾನವನನ್ನು ಸೃಷ್ಟಿಸಿದರೆ; ಮಾನವ ಸಮಾಜವನ್ನು ಸೃಷ್ಟಿಸಿದ್ದಾನೆ' ಎಂಬ ಮಾತು ಸಾಮಾಜಿಕವಾಗಿ ಮನುಕುಲಕ್ಕೆ ಸಂಬಂಧಿಸಿದಂತೆ ಒಂದು ಮಹತ್ತರವಾದ ಅರ್ಥವಿವರಣೆಯನ್ನು ಒಳಗೊಂಡಿದೆ. ಪರಸ್ಪರ ಸಹಕಾರದಿಂದ ಮಾತ್ರ ಮನುಷ್ಯರು ಬಾಳಬಲ್ಲರು. ಬೆಳೆಯಬಲ್ಲರು ಎನ್ನುವುದು ಸರ್ವವಿಧಿತ. ಈ ಹಿನ್ನೆಲೆಯಲ್ಲಿ ಸಾಹಿತ್ಯವು ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದರೂ ಆ ಸೃಷ್ಟಿಗೆ ಪೂರಕವಾದ ಪರಿಸರವನ್ನು, ಪರಿಕರಗಳನ್ನು ಸಮಾಜದಿಂದಲೇ ಕವಿಯಾದವನು ಅಥವಾ ಲೇಖಕನಾದವನು ಪಡೆದುಕೊಳ್ಳುತ್ತಾನೆ. ದಂತ ಗೋಪುರದಲ್ಲಿ ಕುಳಿತು ಕಾವ್ಯ ರಚನೆ ಮಾಡುವ ಕಾಲ ಈಗ ಮುಗಿದುಹೋಗಿದೆ. ಏನಿದ್ದರೂ, ಸಮಾಜದ ನಡುವೆ ನಿಂತು ಜನಸಾಮಾನ್ಯರ. ಜೀವನದ ಆಳ – ಅಗಲಗಳನ್ನು ಅವರ ನೋವು – ಸಂಕಷ್ಟಗಳನ್ನು ಸಾಮಾಜಿಕವಾದ ಜ್ವಲಂತ ಸಮಸ್ಯೆಗಳನ್ನು ತಲಸ್ಪರ್ಶಿಯಾಗಿ ಗ್ರಹಿಸಿ, ಅವುಗಳಿಗೆ ಒಂದು ಸಮರ್ಥ ಅಭಿವ್ಯಕ್ತಿ ಕೊಡುವ ಕಾರ್ಯವನ್ನು ಮಾಡಬೇಕಾಗುತ್ತದೆ. ಹಾಗೆ ಮಾಡಿದಾಗ ಮಾತ್ರ ಸಾಹಿತ್ಯ ನಿರ್ಮಿತಿಗೆ ಸಮಕಾಲೀನತೆ ಲಭ್ಯವಾಗುತ್ತದೆ. ಕವಿತೆಯು ಕೋಣೆಯಲ್ಲಿ ಕೊಳೆಯದೆ, ಅದು ಬೀದಿಗೆ ಬರಬೇಕು ಎನ್ನುವುದು ಹೊಸ ಸಹಸ್ರಮಾನದ ವ್ಯಾಖ್ಯಾನವಾಗಿದೆ.

ಜಿ.ಎಸ್.ಎಸ್. ಹೇಳಿರುವಂತೆ "ಸಾಹಿತ್ಯವು ಜೀವನದ ಪ್ರತಿಬಿಂಬವಲ್ಲ, ಅದು ಜೀವನದ ಗತಿಬಿಂಬ"[೧] ಎಂಬ ಮಾತಿಗೆ ಕಟಿಬದ್ಧರಾಗಿರುವ ರೂಪ ಹಾಸನ ಅವರು ಸಾಮಾಜಿಕ ಸೇವೆ ಮಾಡುತ್ತಲೇ ವಿವಿಧ ವರ್ಗಗಳ ಜನರ ನಾಡಿಮಿಡಿತವನ್ನು ಅರಿತವರು. 'ನಮ್ಮ ಕವಿತೆಗಳ ಹಿಂದೆ ಸಂವೇದನೆ ಇರುವಂತೆ, ಹಸಿದವನ ಹೊಟ್ಟೆಯಲ್ಲಿ ವೇದನೆ ಇರುತ್ತದೆ' ಎನ್ನುವ ಜಯದೇವಿ ತಾಯಿ ಲಿಗಾಡೆ ಅವರ ಅಭಿಪ್ರಾಯದಂತೆ ಕವಯತ್ರಿ ತಮ್ಮ ನೂರಾರು ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು, ಸಮಸ್ಯೆಗಳಿಗೆ ಕಿವಿಗೊಡುವ, ಅವುಗಳಿಗೆ ಪರಿಹಾರ ಸೂಚಿಸುವ ಮನೋಧೋರಣೆ ಹೊಂದಿರುತ್ತಾರೆ. ಅವರ ಮೊದಲ ಕವನ ಸಂಕಲನವಾದ 'ಒಂದಿಷ್ಟು ಹಸಿ ಮಣ್ಣು' ಕೃತಿಯನ್ನು ವಿಮರ್ಶಕರಾದ ಡಾ. ಶಂಕರ್ ವಿಮರ್ಶಿಸುತ್ತಾ "ಒಂದಿಷ್ಟು ಹಸಿಮಣ್ಣು ಕವಿತೆಯಲ್ಲಿ ಹಸಿಮಣ್ಣನ್ನು ಪ್ರೀತಿ, ಅಂತಃಕರಣಗಳಂತೆ ಆರ್ದ್ರ ಭಾವನೆಗಳಿಗೆ ರೂಪವಾಗಿಸಿ, ಹೆಣ್ಣು ತನಗೆ ಎದುರಾದ ಕ್ರೌರ್ಯ, ಶೋಷಣೆ, ಅಸಮಾನತೆಯ, ನಡುವೆಯೂ ಒಂದಿಷ್ಟು ಪ್ರೀತಿಯನ್ನು ಬೇಡುವ, ಅದು ದೊರೆತರೆ ಅದರಲ್ಲೇ ತನ್ನ ಬದುಕಿನ

ಸಾಫಲ್ಯವನ್ನು ಕಂಡುಕೊಳ್ಳುವ ಆಶಾಭಾವನೆಯನ್ನು ವ್ಯಕ್ತಪಡಿಸಿದ್ದಾರೆ" ಎನ್ನುವಲ್ಲಿ ರೂಪ ಹಾಸನ ಅವರ ಹೆಣ್ಣಿನ ಬಗೆಗಿನ ಅಂತಃಕರಣವನ್ನು, ಸಾಮಾಜಿಕ ಬದ್ಧತೆಯನ್ನು ಗುರುತಿಸಬಹುದಾಗಿದೆ.

'ಬಾಗಿಲಾಚೆಯ ಮೌನ'ದಲ್ಲಿ ಬರುವ 'ವ್ಯಾಪಾರ' ಎಂಬ ಕವಿತೆಯು ಜಾಗತೀರಕಣದ ಕರಾಳ ಮುಖಗಳನ್ನು ತೆರೆದಿಡುತ್ತದೆ. ನಿದರ್ಶನವಾಗಿ ಹೂವು – ಹಣ್ಣು, ಹಸಿರು–ಮೀನು, ನಾನು – ನೀನು – ಅವನು ಎಲ್ಲ ಇಲ್ಲಿ ಬಿಕರಿಗಿಟ್ಟ ಸರಕು ಎನ್ನುವಲ್ಲಿ ಆಧುನಿಕ ಜಗತ್ತಿನ ಕೊಳ್ಳುಬಾಕ ಸಂಸ್ಕೃತಿಯು ಎಷ್ಟರ ಮಟ್ಟಿಗೆ ನಾಗಾಲೋಟದಲ್ಲಿ ಮುನ್ನುಗ್ಗುತ್ತಿದೆ ಎಂಬ ಸಂಗತಿಯು ವೇದ್ಯವಾಗುತ್ತದೆ. ಇಲ್ಲಿ ಕವಯಿತ್ರಿ ಅವರು ಮಾನವನ ವ್ಯಾಪಾರ ಮನೋವೃತ್ತಿ ಎಷ್ಟು ಭೀಕರವಾಗಿದೆ ಎನ್ನುವುದನ್ನು ಕಟ್ಟಿಕೊಟ್ಟಿದ್ದಾರೆ.

'ಕಡಲಿಗೆಷ್ಟೊಂದು ಬಾಗಿಲು' ಎಂಬ ಸಂಕಲನದಲ್ಲಿ ಬರುವ 'ನಾವು ಅವರಂತಲ್ಲ' ಎಂಬ ಕವಿತೆಯು ಪುರುಷನ ಅಟ್ಟಹಾಸದಿಂದ ಈವರೆಗೆ ಸಮಾಜ ಛಿದ್ರಗೊಂಡ ಬಗೆಯನ್ನು, ಅವನ ಚದುರಂಗ ಬಲದಿಂದ ರಕ್ತಸಿಕ್ತವಾದ ಚರಿತ್ರೆಯನ್ನು ಬೆತ್ತಲೆ ಮಾಡುತ್ತಲೇ ಈ ನರಮೇಧಗಳಿಗೆ ಸ್ತ್ರೀಕುಲದ ನೆರವು ಕಿಂಚಿತ್ತು ಇಲ್ಲ. ಇದೆಲ್ಲದರ ಪಾಪವನ್ನು ನೀನೇ ಹೊರಬೇಕು ಎಂದು ನಿರೂಪಿಸುತ್ತಾ ಚರಿತ್ರೆಯಾಗದ ನಾವು ಸದಾ ವರ್ತಮಾನದಲ್ಲಿರುತ್ತೇವೆ ಎಂದು ಹೇಳುವಲ್ಲಿ ಅವರ ನಿಷ್ಕಪಟ ಮನೋಧೋರಣೆ ವ್ಯಕ್ತವಾಗಿದೆ.

ರೂಪ ಅವರ ಕಿರುಪದ್ಯಗಳ ಕಲಾಕೃತಿಯಾದ 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಹಸಿವು ಮತ್ತು ರೊಟ್ಟಿಯ ಸುತ್ತಲ ಪ್ರಪಂಚವನ್ನು ಅನುಭವ ಮತ್ತು ಅನುಭಾವದ ನೆಲೆಯಲ್ಲಿ ಹಿಡಿದಿಡುತ್ತಾರೆ. ಹಸಿವು ಮತ್ತು ರೊಟ್ಟಿಯನ್ನು ಬಂಡವಾಳವಾಗಿ ಮಾಡಿಕೊಂಡು ನಡೆಯುತ್ತಿರುವ ಸಾಮಾಜಿಕ ಮತ್ತು ರಾಜಕಾರಣದ ಚಲನೆಯನ್ನು ಕವಿಯಿತ್ರಿ ಅವರು ಅತ್ಯಂತ ಸಮರ್ಥವಾಗಿ ವಿಡಂಬಿಸಿದ್ದಾರೆ. ಈ ಕೃತಿಯ ಉದ್ದಗಲಕ್ಕೂ ಹಸಿವು ಮತ್ತು ರೊಟ್ಟಿ ಸಮಾಜದ ಸ್ಥಿತ್ಯಂತರಗಳಿಗೆ, ಬದಲಾವಣೆಗಳಿಗೆ ಹೇಗೆ ಕಾರಣೀಭೂತವಾಗುತ್ತದೆ ಎಂಬುದನ್ನು ಖಂಡತುಂಡವಾಗಿ ಖಂಡಿಸುವಲ್ಲಿ ಕವಿಯತ್ರಿ ಅವರ ಸಾಮಾಜಿಕ ಗ್ರಹಿಕೆಯನ್ನು ವಿಮರ್ಶಕರು ಗುರುತಿಸಿದ್ದಾರೆ.

ರೂಪ ಹಾಸನ ಅವರು ತಮ್ಮ ಕವಿತೆಗಳಲ್ಲಿ ಸ್ತ್ರೀ ಅಸ್ಮಿತೆಯನ್ನು, ಅವಳ ಬದುಕಿನ ಅನನ್ಯತೆಯನ್ನು ಹಿಡಿದಿಟ್ಟಿರುವಂತೆ ಇನ್ನೂ ಅನೇಕ ಪದ್ಯಗಳಲ್ಲಿ ನಿಖರವಾದ ಅವರ ಸಾಮಾಜಿಕ ಪ್ರಜ್ಞೆ ಪ್ರಕಟಗೊಳ್ಳುತ್ತದೆ. ಸ್ವತಃ ಸಮಾಜ ಸೇವೆಯಲ್ಲಿ ನಿರತರಾಗಿರುವ ಇವರು ಮಹಿಳೆಯರು, ಮಕ್ಕಳು, ವಿಕಲಚೇತನರು, ಗ್ರಾಮೀಣ ಶಿಕ್ಷಣ, ಸಮುದಾಯ ಅಭಿವೃದ್ಧಿ ಇತ್ಯಾದಿ ಕ್ಷೇತ್ರಗಳ ಬಗ್ಗೆ ಸ್ಪಷ್ಟ ತಿಳುವಳಿಕೆಯನ್ನು ಹೊಂದಿದ್ದು, ಇಲ್ಲಿನ ಸಮಸ್ಯೆ ಸವಾಲುಗಳನ್ನು ತಮ್ಮ ಕಾವ್ಯದ ಮುಖೇನ ಸೃಜಿಸುವಲ್ಲಿ ರೂಪಾರವರ ಸಾಮಾಜಿಕ ಪ್ರಜ್ಞೆ ಪ್ರಜ್ವಲಿಸುತ್ತದೆ. ಸಮಕಾಲೀನ ಸನ್ನಿವೇಶಗಳಿಗೆ ತುಡಿಯುವುದು ಇವರ ಬಹುತೇಕ ಕವಿತೆಗಳ

ಜೀವಸೆಲೆಯಾಗಿದೆ. ಹೆಣ್ಣುಭ್ರೂಣ ಹತ್ಯೆ, ಬಡತನ, ಮಹಿಳೆಯರ ಮೇಲಿನ ಅತ್ಯಾಚಾರ, ಬಾಲ್ಯವಿವಾಹ, ವರದಕ್ಷಿಣೆ ಪಿಡುಗು, ಮಕ್ಕಳ ಕಳ್ಳ ಸಾಗಾಣಿಕೆ, ಬಾಲ ಕಾರ್ಮಿಕರು, ಬಾಲಾಪರಾಧ, ಮಹಿಳೆ ಮತ್ತು ಮಕ್ಕಳ ಶಿಕ್ಷಣ, ಇವೆಲ್ಲವುಗಳನ್ನು ಕುರಿತಂತೆ ರೂಪ ಅವರ ಕಾವ್ಯ ಬೆಳಕು ಚೆಲ್ಲುತ್ತದೆ. ಅವರ ಸಾಹಿತ್ಯ ಚಿಂತನೆ ಈ ನೆಲೆಗಳಿಂದ ಆವಿರ್ಭವಿಸುತ್ತದೆ. ಈ ಸಂದರ್ಭದಲ್ಲಿ ಕವಯಿತ್ರಿಯವರು ಕೇವಲ ಸಮಸ್ಯೆಗಳನ್ನು ಗುರುತಿಸುವುದು ಮಾತ್ರವಲ್ಲ; ಅವುಗಳಿಗೆ ತಕ್ಕ ಪರಿಹಾರಗಳನ್ನು ಸೂಚಿಸುವಲ್ಲಿ ಪ್ರಯತ್ನಿಸುತ್ತಿದ್ದಾರೆ. ತಮ್ಮ ಲೇಖನಿಯನ್ನು ನೋವಿಗೆ ಮಿಡಿಯುವ ಪ್ರಾಣವಾಯುವಿನಂತೆ ಬಳಸಿಕೊಳ್ಳುತ್ತಿರುವುದು ವಿಶಿಷ್ಟಪೂರ್ಣವಾಗಿದೆ.

ರೂಪ ಹಾಸನ ಅವರ ನಾಲ್ಕು ಕವನ ಸಂಕಲನಗಳ ಹತ್ತಾರು ಕವಿತೆಗಳಲ್ಲಿ ಹಾಸುಹೊಕ್ಕಾಗಿರುವ ಸಾಮಾಜಿಕ ಆಯಾಮಗಳನ್ನು, ಸಾಂಸ್ಕೃತಿಕ ಸನ್ನಿವೇಶಗಳನ್ನು, ಸಮಾಜಮುಖಿ ಧೋರಣೆಗಳನ್ನು ಅವರ ಕವಿತೆಗಳ ಉಲ್ಲೇಖದೊಂದಿಗೆ ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. 'ಒಂದಿಷ್ಟು ಹಸಿಮಣ್ಣು' ಕೃತಿಯಲ್ಲಿ ಬರುವ 'ಅಶರೀರ ಜೀವ' ಎಂಬ ಕವಿತೆಯು ಪ್ರಸ್ತುತ ನಡೆಯುತ್ತಿರುವ ಹೆಣ್ಣು ಭ್ರೂಣ ಹತ್ಯೆಯ ಕರಾಳ ಚಿತ್ರಣವನ್ನು ಕಟ್ಟಿಕೊಡುತ್ತದೆ. ಭ್ರೂಣ ಶಿಶುವಾಗುವ ಮುನ್ನವೇ ಚಿವುಟಿ ಹಾಕುತ್ತಿರುವ ಕ್ರೂರ ಮನಸ್ಸುಗಳನ್ನು ರೂಪಾರವರು ತರಾಟೆಗೆ ತೆಗೆದುಕೊಳ್ಳುತ್ತಾರೆ. ಇಂದಿನ ಲಿಂಗಾನುಪಾತದ ಸಮಸ್ಯೆಗೆ ಈ ರೀತಿಯ ಕ್ರೌರ್ಯಗಳೇ ಕಾರಣ ಎನ್ನುವುದು ಇವರ ಅಭಿಮತವಾಗಿದೆ. "ಕೊಬ್ಬಿದ ಕುರಿಯ ಕಟುಕ ಕಚಕ್ಕನೆ ಕತ್ತರಿಸುವಂತೆ" ಎನ್ನುವಲ್ಲಿ ಹೆಣ್ಣು ಭ್ರೂಣ ಹತ್ಯೆಯಲ್ಲಿ ತೊಡಗಿರುವವರ ನೈತಿಕತೆಯ ದಿವಾಳಿತನವನ್ನು, ಮಾನಸಿಕ ಕ್ರೌರ್ಯವನ್ನು ಕರುಳು ಹಿಂಡುವಂತೆ ಚಿತ್ರಿಸಲಾಗಿದೆ. ಒಂದು ಆರೋಗ್ಯಕರವಾದ ಸಮಾಜದ ನಿರ್ಮಿತಿಯಲ್ಲಿ 'ಗಂಡು ಎಷ್ಟು ಮುಖ್ಯವೋ, ಹೆಣ್ಣು ಕೂಡ ಅಷ್ಟೇ ಮುಖ್ಯ' ಎಂಬ ಕಟುಸತ್ಯವನ್ನು ಮನಗಾಣದೇ ಹೋದ ಪುರುಷಕೇಂದ್ರಿತ ವ್ಯವಸ್ಥೆಯ ಬಗ್ಗೆ ಕಾವ್ಯಕ್ಕೆ ಆಕ್ರೋಶವಿದೆ. ಗಂಡಿನಲ್ಲಿರುವ ಹೆಣ್ಣುತನವನ್ನು, ಹೆಣ್ಣಿನಲ್ಲಿರುವ ಗಂಡುತನವನ್ನು ಗುರುತಿಸದೇ ಹೋದದ್ದು ನಮ್ಮ ಮೂರ್ಖತನದ ಪರಮಾವಧಿಯಾಗಿದೆ. ಈ ಕವಿತೆಯು ಮಾಲತಿ ಪಟ್ಟಣಶೆಟ್ಟಿ ಅವರ "ನಾ ಬರಿಯ ಭ್ರೂಣವಲ್ಲ" ಎಂಬ ಪದ್ಯವನ್ನು ನೆನಪಿಗೆ ತರುತ್ತದೆ. ಹೆಣ್ಣು ಭ್ರೂಣ ಹತ್ಯೆಯ ಬಗ್ಗೆ ರೂಪರವರು ವ್ಯಕ್ತಪಡಿಸುವ ಸಂಕಟವನ್ನು ಮತ್ತು ಹೊರಚೆಲ್ಲಿರುವ ಬಂಡಾಯ ಪ್ರಜ್ಞೆಯನ್ನು ಕವಿತೆಯ ಈ ಸಾಲುಗಳಿಂದ ಮನಗಾಣಬಹುದಾಗಿದೆ.

"ಹಸಿ ಹಸಿ ಮೊಟ್ಟೆ ಕುಡಿದು ಜೀವ ಬಸಿವ
ನರರಾಕ್ಷಸರ ಈ ರುದ್ರತಾಂಡವ!
ಹೆಣ್ಣು ಭ್ರೂಣಗಳು ಹೆಣವಾಗಿ, ಮಣ್ಣಾಗಿ
ಗಂಡು ಭ್ರೂಣಗಳು ಹೆಣ್ಣಾಗಿ ಮಾಗಿ
ಜೀವಂತ ಗಂಡು ಜೀವಕ್ಕೆ
ಅಶರೀರ ಹೆಣ್ಣು ಮರೀಚಿಕೆ

ಉತ್ತರವಿಲ್ಲವೇ ಈ ಘೋರಕೆ ಪ್ರಕೃತಿಯೊಳಗೆ?
ಕಾಲವೇ ಕ್ರಾಂತಿಮಂತ್ರ ಈ ಇಳೆಗೆ!?"[೨] (ಅಶರೀರ ಜೀವ)

'ಬದುಕೆಂದರೆ ಇಲ್ಲಿ . . . .' ಎಂಬ ಕವನವು 'ಒಂದಿಷ್ಟು ಹಸಿಮಣ್ಣು' ಕೃತಿಯಲ್ಲಿ ಬರುವ ಕವಯಿತ್ರಿಯವರ ಸಾಮಾಜಿಕ ಪ್ರಜ್ಞೆಗೆ ಹಿಡಿದ ಕೈಗನ್ನಡಿಯಾಗಿದೆ. ಪ್ರಸ್ತುತ ಸನ್ನಿವೇಶದಲ್ಲಿ ಇಡೀ ಜಗತ್ತು ಯುದ್ಧಗಳಿಂದ ತುಂಬಿ ಹೋಗಿದೆ. ಗಡಿಗಾಗಿ, ಜಲಕ್ಕಾಗಿ ಪ್ರತಿನಿತ್ಯವೂ ನೂರಾರು ಜನ ಅಸಂಖ್ಯಾತ ಸೈನಿಕರ ಮಾರಣಹೋಮವೇ ಇಲ್ಲಿ ನಡೆಯುತ್ತಿದೆ. ಜೀವಕ್ಕೆ ಯಾವುದೇ ಬೆಲೆಯನ್ನು ನೀಡಲಾಗುತ್ತಿಲ್ಲ. ಜೀವ ತೆತ್ತವರ ಬಂಧುಗಳ ಆಕ್ರಂದನ ಇಲ್ಲಿ ಮುಗಿಲು ಮುಟ್ಟಿದೆ. ಇಡೀ ಮನುಕುಲವೇ ರಕ್ತಸಿಕ್ತವಾಗುತ್ತಿರುವುದನ್ನು ಮನಕರಗುವಂತೆ ಕವಿತೆಯಲ್ಲಿ ಕಡಿಯಲಾಗಿದೆ. ಮಾರಕಾಸ್ತ್ರಗಳೇ ಆಟದ ಸಾಮಾನುಗಳಂತಾಗಿರುವುದು ಘೋರ ದುರಂತ ಎಂಬ ಭಾವ ಇಲ್ಲಿ ಅಭಿವ್ಯಕ್ತಗೊಂಡಿದೆ. ಸಮಾಜವನ್ನು ಕಟ್ಟುವ ಬದಲು, ರಾಷ್ಟ್ರ ರಾಷ್ಟ್ರಗಳ ನಡುವೆ ಸಾಮರಸ್ಯವನ್ನು ಬೆಸೆಯುವ ಬದಲು ಇಡೀ ವ್ಯವಸ್ಥೆಯನ್ನು ಛಿದ್ರಗೊಳಿಸುತ್ತಿರುವ ವಿಕೃತ ಶಕ್ತಿಗಳ ವಿರುದ್ಧ ಕವನ ಅಗ್ನಿಕುಂಡವಾಗಿದೆ. ಈ ವಿವರಣೆಗೆ ಪೂರಕವಾಗಿ ಕವಿತೆಯ ಕೆಲವು ಸಾಲುಗಳನ್ನು ನೋಡಬಹುದಾಗಿದೆ.

"ಬದುಕೆಂದರೆ ಇಲ್ಲಿ ಹೇ ತಂದೆ
ಮಾರಕಾಸ್ತ್ರಗಳಾಟವೇ?
ರುಂಡ, ಚೆಂಡಾಡುವ ಹೂಟವೇ?
ರಾಶಿ ಹೆಣಗಳ ಕೂಟವೇ?
ಕಣ್ಣಾಮುಚ್ಚೆ ಮಕ್ಕಳಾಟವೇ?
ಬದುಕಿಸುವ ಮಂತ್ರ ಅರಿಯದ
ಹುಲುಮನುಜ
ಬದುಕು ಅಳಿಸುವ ತಂತ್ರ ಅರಿತದ್ದು
ಸರಿಯೇ ಪ್ರಭುವೇ?
ಇಲ್ಲಿ ಜೀವಕ್ಕೆ
ಬೆಲೆ ಇದೆಯೇ?"[೩] (ಬದುಕೆಂದರೆ ಇಲ್ಲಿ ....)

'ಒಂದಿಷ್ಟು ಹಸಿಮಣ್ಣು' ಕೃತಿಯಲ್ಲಿ ಓದುಗರ ಗಮನ ಸೆಳೆಯುವ 'ಸ್ಥಿತ್ಯಂತರ' ಕವಿತೆಯು ಸಮಾಜದಲ್ಲಿ ಸೃಷ್ಟಿಯಾಗಿರುವ ಪ್ರಕ್ಷುಬ್ಧತೆಯನ್ನು, ಕೋಲಾಹಲವನ್ನು ಹಾಗೂ ಮಾನವ ಸಂಬಂಧಗಳ ಛಿದ್ರೀಕರಣವನ್ನು ಧ್ವನಿಸುತ್ತದೆ. ದುಸ್ತರವಾಗುತ್ತಿರುವ ಬದುಕಿನ ಬವಣೆಯನ್ನು, ಮಾನವನನ್ನು ಕಾಡುತ್ತಿರುವ ಅನಾಥ ಪ್ರಜ್ಞೆಯನ್ನು, ಪರಸ್ಪರ ಗಂಡು ಹೆಣ್ಣಿನ ನಡುವೆ ಉಂಟಾಗುತ್ತಿರುವ ಬಿರುಕುಗಳನ್ನು, ಸಾಮಾಜಿಕ ಪಲ್ಲಟಗಳನ್ನು ಕವಿತೆಯಲ್ಲಿ ಬರುವ ಪ್ರತಿ ಪದಗಳು ಪ್ರತಿಧ್ವನಿಸುತ್ತಿವೆ. ಈ ಎಲ್ಲಾ ಸಂಗತಿಗಳನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸಿರುವುದನ್ನು ಗಮನಿಸಿದಾಗ ಕವಿಯ ಸಾಮಾಜಿಕ

ಪ್ರಜ್ಞೆ, ಸಮಕಾಲೀನ ವಿಮರ್ಶೆ ಎಷ್ಟು ಪ್ರಖರವಾಗಿದೆ ಎಂಬ ಅಂಶ ವೇದ್ಯವಾಗುತ್ತದೆ. ಕವಿತೆಯ ಸಾಲುಗಳನ್ನು ನೋಡಿ ಮೇಲಿನ ವಿವರಣೆಯನ್ನು ಅವಲೋಕಿಸಬಹುದಾಗಿದೆ.

"ಅದು ಬೇಕು, ಇದೂ ಬೇಕು
ಎಲ್ಲವೂ ಬೇಕು ಎನ್ನುವಂತಿಲ್ಲ
ಇಲ್ಲಿ ಆಯ್ಕೆಗಿರುವುದೊಂದೇ ಬದುಕು
ಎದೆಗೆ ಗುರಿಯಿಟ್ಟಿದೆ ಬಂದೂಕು!"[೪] (ಸ್ಥಿತ್ಯಂತರ)

'ಅಮ್ಮ ಹೇಳಿದ್ದು' ಕವಿತೆಯು ಶತಮಾನಗಳಿಂದ ಬಂದಿರುವ ಸ್ತ್ರೀ ಶೋಷಣೆಯ ಪರಂಪರೆಯನ್ನು, ಪ್ರಸ್ತುತ ಅವಳ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಅಮೂರ್ತವಾಗಿ ಕಟ್ಟಿಕೊಡುತ್ತದೆ. ಸನಾತನ ಕಾಲದಿಂದ ಈತನಕ ಮಹಿಳೆ ಅನುಭವಿಸಿರುವ ಬದುಕಿನ ಬವಣೆಯನ್ನು ಸಮಾಜದಲ್ಲಿದ್ದೂ, ಸಾಮಾಜೀಕರಣಗೊಳ್ಳದ ಆಕೆಯ ಜೀವನವನ್ನು ಇಲ್ಲಿ ಅಮ್ಮನಿಂದ ಮಗಳಿಗೆ, ಮತ್ತೆ ಅವಳ ಮಗಳಿಗೆ ಹೇಳುವ ಪರಿಯಲ್ಲಿ ಕವಿತೆ ಮುಂದುವರೆಯುತ್ತದೆ. ಕೆಳಗಿನ ಸಾಲುಗಳನ್ನು ನೋಡಿದಾಗ ಈ ಸಂಗತಿ ನಮಗೆ ವೇದ್ಯವಾಗುತ್ತದೆ.

"ಇದು ನನ್ನ ಕಲ್ಪನೆಯ
ಕಥೆಯಲ್ಲ ಮಗಳೇ
ನನ್ನಮ್ಮ ನನಗೆ ಹೇಳಿದ್ದು
ಅವಳಮ್ಮ ನನ್ನಮ್ಮನಿಗೆ ಹೇಳಿದ್ದಂತೆ
ಈಗ ನಾ ನಿನಗೆ ಹೇಳಿದಂತೆ
ನಾಳೆ ನೀ ನಿನ್ನ
ಮಗಳಿಗೆ ಹೇಳುವಂತೆ
ಇದೊಂದು ರೀತಿ ಚಕ್ರದಂತೆ!"[೫] (ಅಮ್ಮ ಹೇಳಿದ್ದು)

"ಬಾಗಿಲಾಚೆಯ ಮೌನ" ಕೃತಿಯಲ್ಲಿ ಬರುವ 'ವ್ಯಾಪಾರ' ಎಂಬ ಕವಿತೆಯು ಸಮಾಜದಲ್ಲಿ ತಾಂಡವವಾಡುತಿರುವ ಕೊಳ್ಳುಬಾಕ ಸಂಸ್ಕೃತಿಯನ್ನು ಕುರಿತು ಬೆಳಕು ಚೆಲ್ಲುತ್ತದೆ. ಇಡೀ ಮಾನವನ ಬದುಕು ಬದುಕಾಗದೇ ವ್ಯಾಪಾರೀಕರಣಗೊಳ್ಳುತ್ತಿರುವ ಸನ್ನಿವೇಶವನ್ನು ಕವನವು ಖಂಡರಿಸುತ್ತದೆ. ವಸಹಾತುಶಾಹಿ ಸಂದರ್ಭದ ಮಾರುಕಟ್ಟೆ ಪ್ರವೃತ್ತಿಗಳನ್ನು ನೆನಪಿಗೆ ತರುವಂತಹ ಸಾಲುಗಳು ಇಲ್ಲಿ ಕಂಡುಬರುತ್ತವೆ. ಜಾಗತೀಕರಣದ ಫಲವಾಗಿ ಮಾನವನ ಸಂಬಂಧಗಳಲ್ಲಿ ಬಿರುಕುಗಳು ಏರ್ಪಟ್ಟು, ಒಬ್ಬರು ಮತ್ತೊಬ್ಬರನ್ನು ಸಂಶಯದಿಂದ ನೋಡುವ ಮನೋವೃತಿ ಹೆಚ್ಚಾಗುತ್ತಿದೆ, ಪ್ರಸ್ತುತ ಸನ್ನಿವೇಶದಲ್ಲಿ ಮಾನವೀಯ ಮೌಲ್ಯಗಳನ್ನು ಗಾಳಿಗೆ ತೂರಿ ಕೇವಲ ಹಣಗಳಿಸುವುದೊಂದೇ ಜೀವನದ ಪರಮೋಚ್ಛ ಗುರಿ ಎನ್ನುವ ಅರ್ಥದಲ್ಲಿ ಸಮಾಜವು ಮುನ್ನುಗ್ಗುತ್ತಿದೆ. ಇಲ್ಲಿ ಏನಿದ್ದರೂ ವಿಕ್ರಯ

ಪ್ರವೃತ್ತಿಗೆ ಮಾತ್ರ ಮಣೆಹಾಕಲಾಗುತ್ತದೆ. ಹೆಚ್ಚುತ್ತಿರುವ ಆರ್ಥಿಕ ಅಸ್ಪೃಶ್ಯತೆಯನ್ನು ಕವಿತೆಯು ಧ್ವನಿಸುತ್ತದೆ. ಕವಿತೆಯ ಕೆಲವು ಸಾಲುಗಳು ಜಾಗತೀಕರಣದಲ್ಲಿ ಮುನ್ನುಗ್ಗುತ್ತಿರುವ ಮಾನವ ಸಮಾಜದ ಕರಾಳ ಚಿತ್ರಣವನ್ನು ನಮ್ಮ ಮುಂದೆ ಅನಾವರಣಗೊಳಿಸುತ್ತವೆ.

"ಇಲ್ಲಿ ನಿತ್ಯ ಸಂತೆ
ಅನುಕ್ಷಣವೂ ಬಿರುಸಿನ ಮಾರಾಟ
ಎಲ್ಲ ಎಲ್ಲವೂ ವ್ಯಾಪಾರದಾಟ
..........................................
ಕೊಡುವುದೆಷ್ಟು? ಕೊಳ್ಳುವುದೆಷ್ಟು?
ಲಾಭವೆಷ್ಟು? ನಷ್ಟವೆಷ್ಟು?
ಎಲ್ಲ ಬರಿಯ ಲೆಕ್ಕ
ತಕ್ಕಡಿಯೇ ಇಲ್ಲಿ ಮುಖ್ಯ"[೬] (ವ್ಯಾಪಾರ)

ಪ್ರಸ್ತುತ ನಡೆಯುತ್ತಿರುವ ನವವಸಾಹತುಶಾಹಿ ಪರಿಣಾಮಗಳನ್ನು 'ವ್ಯಾಪಾರ' ಕವಿತೆಯು ಅತ್ಯಂತ ಸಮರ್ಥವಾಗಿ ಕಟ್ಟಿಕೊಡುತ್ತದೆ.

'ಕಡಲಿಗೆಷ್ಟೊಂದು ಬಾಗಿಲು' ಕೃತಿಯು ರೂಪ ಹಾಸನ ಅವರ ಈ ಹಿಂದಿನ ಎರಡು ಸಂಕಲನಗಳಾದ 'ಒಂದಿಷ್ಟು ಹಸಿಮಣ್ಣು' ಮತ್ತು 'ಬಾಗಿಲಾಚೆಯ ಮೌನ' ರಚನೆಗಳಿಗಿಂತ ಈ ಸಂಕಲನದಲ್ಲಿ ಕವಯಿತ್ರಿಯವರು ವಿಭಿನ್ನ ಸಾಮಾಜಿಕ ಆಯಾಮಗಳಲ್ಲಿ ಇಲ್ಲಿನ ಕವಿತೆಗಳನ್ನು ಕಟ್ಟಿಕೊಡುತ್ತಾರೆ. ಅವರ ಸಮಾಜಮುಖಿ ಒಳಗಣ್ಣು ಹೆಚ್ಚು ಪ್ರಖರಗೊಳ್ಳುತ್ತಾ ಯುಗಧರ್ಮಕ್ಕೆ ಅನುಗುಣವಾಗಿ ಲೇಖನಿ ಓಡಬೇಕೆಂಬ ತಿಳುವಳಿಕೆಯನ್ನು ಕಾಣಬಹುದಾಗಿದೆ. 'ಕಡಲಿಗೆಷ್ಟೊಂದು ಬಾಗಿಲು' ಎಂಬ ಕವಿತೆಯು ಇಡೀ ಸ್ತ್ರೀ ಸಮುದಾಯವು ತನ್ನೊಳಗಿನ ಕೀಳರಿಮೆಯನ್ನು ಕಳೆದುಕೊಂಡು, ಬಾಗಿಲನ್ನು ದಾಟಿ ಹೊರಬಂದು ಸಮಾಜಮುಖಿಯಾಗಿ ಬೆಳೆಯಬೇಕೆಂದು ಆಗ್ರಹಿಸುತ್ತದೆ. ಸನಾತನ ಕಾಲದ ಅಸಮ ಪುರಾಣಗಳು ನಿರ್ಮಿಸಿದ್ದ ಗೊಡ್ಡು ಸಂಪ್ರದಾಯಗಳನ್ನು ಒಡೆದು, ಪ್ರಸ್ತುತ ಸನ್ನಿವೇಶಕ್ಕೆ ನಿನ್ನನ್ನು ನೀನು ಒಳಗು ಮಾಡಿಕೊಂಡು ವಿಕಾಸಹೊಂದಬೇಕೆಂದು ಕವಿತೆಯು ಆಶಿಸುತ್ತದೆ. ಸಾಮಾಜಿಕವಾಗಿ ತಿರಸ್ಕಾರಕ್ಕೆ ಒಳಗಾಗಿರುವ ಸ್ತ್ರೀ ತನ್ನ ಅಸ್ಮಿತೆಯನ್ನು, ಅನನ್ಯತೆಯನ್ನು ಪ್ರಚುರಪಡಿಸುವ ಮುಖೇನ ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ತನ್ನ ಸ್ಥಾನವನ್ನು ಎತ್ತರಿಸಿಕೊಳ್ಳಬೇಕು. ತನ್ನೊಳಗಿನ ಶಕ್ತಿ ಸಾಮರ್ಥ್ಯಗಳಿಂದ ಒಂದು ಪ್ರಭಾವಲಯವನ್ನು ಬಿತ್ತರಿಸಿಕೊಂಡು, ಸರ್ವತೋಮುಖ ವಿಕಾಸಹೊಂದಬೇಕೆಂದು ಇಲ್ಲಿನ ಸಾಲುಗಳು ತುಡಿಯುತ್ತವೆ.

"ನೋಡಿಲ್ಲಿ ನಿನ್ನೊಳಗಿನ ಈ
ಕಡಲಿಗೆಷ್ಟೊಂದು ಬಾಗಿಲು

ಬಿಡು ರಕ್ತಕ್ಕಂಟಿದ
ಓಬೀರಾಯನ ಕಾಲದ ಪುರಾಣ
ಮೊಗೆಮೊಗೆದು ಹೀರು
ಈ ನೀರು

ಒರೆಸಿಕೋ ಕಣ್ಣೀರು ನನ್ನವಳೇ
ಎಲ್ಲೆಡೆ ಹಬ್ಬಲಿ ಹೊಸ ಕಥೆ
ನಿನ್ನ ತಬ್ಬಲಿ ಜನತೆ
ನೀನೇ ಕತೆಯಾಗು
ಸಮುದ್ರದ ಉಪ್ಪಾಗು
ತೆರೆಯುತ್ತಾ ಹೋಗು
ಕಡಲ ಒಂದೊಂದೇ ಬಾಗಿಲು"[೭]

ಬರಗೂರು ರಾಮಚಂದ್ರಪ್ಪ ಅವರು 'ಕಡಲಿಗೆಷ್ಟೊಂದು ಬಾಗಿಲು' ಕೃತಿಯನ್ನು ಪರಿಶೀಲಿಸುವಾಗ ಹೇಳುವ ಮಾತುಗಳೆಂದರೆ – "ವೈಯಕ್ತಿಕತೆ ಮತ್ತು ಸಾಮಾಜಿಕತೆಗಳನ್ನು ಒಂದಾಗಿ ಹಿಡಿಯುವ ಮೂಲಕ ರೂಪ ಹಾಸನ ಅವರು ಹೊಸ ಹೆಜ್ಜೆ ಇಟ್ಟಿದ್ದಾರೆ. ತಂತಮ್ಮ ಸಂತೋಷಕ್ಕಾಗಿ ಬರೆದುಕೊಳ್ಳುತ್ತಿರುವುದಾಗಿ ಯಾರೆಷ್ಟೇ ಹೇಳಿದರೂ ಸೃಜನಶೀಲ ಕ್ರಿಯೆಗಳ ಸಾರ್ಥಕತೆ ಇರುವುದು ಅವರ ಸಾಮಾಜಿಕತೆಯಲ್ಲಿ ಎಂದು ನಂಬಿದವನು ನಾನು. ಸಾಮಾಜಿಕತೆಯೆಂದರೆ ವೈಯಕ್ತಿಕತೆಯ ವಿರೋಧಿಯಲ್ಲ. ವೈಯಕ್ತಿಕತೆಯ ರೂಪಧಾರಣೆಯಲ್ಲಿ ಸಾಮಾಜಿಕ ಬದುಕಿನ ಸತ್ಯಗಳಿಗೆ ಸೋಪಜ್ಞತೆಯನ್ನು ಬಿಟ್ಟುಕೊಡದ ವೈಯಕ್ತಿಕತೆ ಮತ್ತು ವೈಯಕ್ತಿಕತೆಯ ಹೆಸರಿನಲ್ಲಿ ಸಾಮಾಜಿಕ ಸತ್ಯಗಳಿಗೆ ಕುರುಡಾಗದ ಸಾಮಾಜಿಕ ಕಳಕಳಿ – ಎರಡನ್ನೂ ಒಟ್ಟಿಗೆ ಸಾಧ್ಯವಾಗಿಸಿಕೊಳ್ಳುವುದು ಸಾರ್ಥಕ ಸೃಜನಶೀಲತೆ, ವಾಸ್ತವ ಸಂಗತಿಯೆಂದರೆ ಸೃಜನಶೀಲತೆ ಇರುವುದು ಹೀಗೆ. ಆದರೆ ಕೆಲವರು ಅದನ್ನು ತೀರಾತೀರಾ ವೈಯಕ್ತಿಕ ಎಂದು ಭ್ರಮಿಸುತ್ತಾ, ನಂಬಿಸುತ್ತಾ, ಶ್ರೇಷ್ಠತೆಯ ಸುಪ್ರೀಂಕೋರ್ಟ್‌ನಲ್ಲಿ ವರ್ತಿಸುವುದು ನಮ್ಮ ಕಾಲದ ಒಂದು ವಿಪರ್ಯಾಸ!"[೮]

ನಿರಂತರವಾಗಿ ಮಾನವನನ್ನು ಕಾಡುತ್ತಿರುವ ಹಸಿವಿನ ಬೇಗುದಿಯನ್ನು ಕುರಿತಂತೆ 'ನಿರಂತರ' ಕವಿತೆಯು ಅತ್ಯಂತ ಪ್ರಖರವಾಗಿ ಮೂಡಿಬಂದಿದೆ. ಒಂದು ಅಗುಳು ಅನ್ನಕ್ಕಾಗಿ ಆಹಾ!ಕಾರ ಪಡುವ ಜನರ ಗೋಳು ಇಲ್ಲಿ ನಿರೂಪಣೆಗೊಂಡಿದೆ. ಒಂದೆಡೆ ಹಸಿವಿನಿಂದ ಸಾಯುವ ಜನರಿದ್ದರೆ; ಮತ್ತೊಂದೆಡೆ ಅಗತ್ಯಕ್ಕಿಂತ ಹೆಚ್ಚು ತಿಂದು ತೇಗುವ ಜನರಿದ್ದಾರೆ. ಈ ಕವಿತೆಯಲ್ಲಿ ತಿಂದವರ ತೇಗು, ಹಸಿದವರ ಕೂಗು, ಪ್ರತಿಧ್ವನಿಗೊಳ್ಳುತ್ತದೆ. ಹಸಿವಿನ ಅಗ್ನಿಕುಂಡದಲ್ಲಿ ಬಿದ್ದಿರುವ ಮಂದಿಯ ಮಾನಸಿಕ ತೊಳಲಾಟ ಇಲ್ಲಿ ಅನಾವರಣಗೊಳ್ಳುತ್ತದೆ. 'ಅನ್ನವಾಗದ ಅಕ್ಕಿ, ಒಲೆಯ ಮೇಲೆ ಪಾತ್ರೆಯಲ್ಲಿ

ಬೇಯುತ್ತಲೇ ಇದೆ' ಎಂಬ ಮಾತು ಪ್ರತಿಮಾತ್ಮಕವಾಗಿದೆ. ಬ್ರಹ್ಮಾಂಡದಷ್ಟು ಹಸಿವು ಹೊತ್ತುಕೊಂಡು ಕಾಯುತ್ತಿರುವ ಜೀವಿಗಳ ಚಿಂತಾಜನಕ ಸ್ಥಿತಿಯನ್ನು ಕವಿತೆಯ ಸಾಲುಗಳಿಂದಲೇ ಗ್ರಹಿಸಬಹುದಾಗಿದೆ.

"ಶತಶತಮಾನಗಳಿಂದ
ಧಗಧಗನೆ ಹೊತ್ತಿ
ಉರಿಯುತ್ತಲೇ ಇದೆ

ಬೇಯುತ್ತಲೇ ಇದೆ
ತಪ್ಪಲೆಯೊಳಗೆ
ಅನ್ನವಾಗದ ಅಕ್ಕಿ" (ನಿರಂತರ)

'ಕಡಲಿಗೆಷ್ಟೊಂದು ಬಾಗಿಲು' ಕೃತಿಯಲ್ಲಿ ಬರುವ 'ತರ್ಕ ಮೀರುವ ಹೊತ್ತು' ಪದ್ಯವು ಗರ್ಭಗುಡಿ ಸಂಸ್ಕೃತಿಯನ್ನು ಕುರಿತು ಬೆಳಕು ಚೆಲ್ಲುತ್ತದೆ. ಇಲ್ಲಿ ಹರನ ಹೆಸರಲ್ಲಿ ನಡೆಯುತ್ತಿರುವ ಅನಾಚಾರಗಳ ಬಗ್ಗೆ ಆಕ್ರೋಶವಿದೆ. ದೇವರು ಮತ್ತು ಧರ್ಮದ ಹೆಸರಿನಲ್ಲಿ ಶ್ರೀ ಸಾಮಾನ್ಯರನ್ನು ಮೋಸಗೊಳಿಸಿ, ಗರ್ಭಗುಡಿಗೆ ಪ್ರವೇಶವನ್ನು ನಿರಾಕರಿಸಿ, ಹೆಣೆಯುತ್ತಿರುವ ಷಡ್ಯಂತ್ರಗಳ ಬಗ್ಗೆ ಕವಿತೆಯು ಧ್ವನಿಪೂರ್ಣವಾಗಿ ತೆರೆದುಕೊಳ್ಳುತ್ತದೆ. ಸಾಮಾಜಿಕವಾಗಿ ಹಿಂದುಳಿದ ಅಸಂಖ್ಯಾತ ಮಂದಿಗೆ ಭಾರತೀಯ ಸಮಾಜದಲ್ಲಿ ದೇವಾಲಯಗಳಿಗೆ ಪ್ರವೇಶ ಇರುವುದಿಲ್ಲ. ಈ ಬಗ್ಗೆ ಕವಯಿತ್ರಿ ಅವರು ಪ್ರತಿರೋಧವನ್ನು ತೋರುತ್ತಾರೆ. ಇಲ್ಲಿ ಬರುವ ಗರ್ಭಗುಡಿಗೆ ಯಾವುದೇ ಕಿಟಕಿಗಳಿಲ್ಲ. ಕತ್ತಲೆಯ ಪ್ರಪಂಚದಲ್ಲಿ ನಡೆಯುತ್ತಿರುವ ವಿಕೃತಗಳ ಅರಿವು ಜನಸಾಮಾನ್ಯರಿಗೆ ಇಲ್ಲವಾಗಿದೆ. ಕವಿತೆಯು ಅಂತಿಮವಾಗಿ ಗರ್ಭಗುಡಿ ಸಂಸ್ಕೃತಿಯನ್ನು ವಿರೋಧಿಸುತ್ತದೆ. ಹೊರಗೆ ಕಾದು ನಿಂತಿರುವ ಜನ ಈ ನಿಷೇಧವನ್ನು ಮುರಿಯಲು ಮುಂದಾಗುತ್ತಾರೆ. "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಬಸವಣ್ಣನ ವಚನದ ಸಾಲು ಈ ಸಂದರ್ಭದಲ್ಲಿ ಔಚಿತ್ಯಪೂರ್ಣವಾಗಿದೆ. ಉದಾಹರಣೆಗಾಗಿ ಕವಿತೆಯ ಸಾಲುಗಳನ್ನು ನೋಡುವುದಾದರೆ:

"ಗರ್ಭಗುಡಿಗೆ ಕಿಟಕಿಯಿಲ್ಲ
ಇರುವೊಂದು ತಲೆಮೊಟ್ಟುವ ಬಾಗಿಲಿಗೆ
ಒಳಗಿಂದ ಜಡಿದಿದೆ ತಾಪಾಳ
ಹೊರಗಿನವರೆದೆಯದೆ ತೀರದ ತಳಮಳ
ಕಾಲ ಸರಿದಂತೆ
ವಿನಾಕಾರಣ ಕಳವಳ
ಒಳಗೇನು ನಡೆದಿದೆಯೋ ಶಿವಶಿವಾ
ಆಲಿಂಗನವೋ? ಚುಂಬನವೋ?

ಹರನೊಂದಿಗೇ ಅಪಚಾರವೋ?
ಶಾಂತಂ ಪಾಪಂ ಇದೆಂಥ ವಿಭ್ರಮೆ?"[೧೦] (ತರ್ಕ ಮೀರುವ ಹೊತ್ತು)

'ನಾವು ಅವರಂತಲ್ಲ' ಎಂಬ ಕವಿತೆಯು ರೂಪಾರವರ ವಿಶಿಷ್ಟ ಸಾಮಾಜಿಕ ಗ್ರಹಿಕೆಯನ್ನು ವಿಭಿನ್ನ ಆಯಾಮದಲ್ಲಿ ಮೈದಳೆಯುತ್ತದೆ. 'ಕಡಲಿಗೆಷ್ಟೊಂದು ಬಾಗಿಲು' ಕೃತಿಯ ಈ ಕವನವು ಪ್ರಸ್ತುತ ರಾಜಕಾರಣವನ್ನು ಕುರಿತಂತೆ ಚದುರಂಗ ಆಟದ ಒಳವರ್ಮಗಳನ್ನು ಬೆತ್ತಲೆ ಮಾಡುವ ರೀತಿಯಲ್ಲಿ ಇಲ್ಲಿನ ಸಾಲುಗಳು ಮೈದಳೆದಿವೆ. 'ನಾವು ಅಂತವರಲ್ಲ' ಎಂಬ ಹೆಸರೇ ಅತ್ಯಂತ ಧ್ವನಿಪೂರ್ಣವಾಗಿದೆ. ಇಲ್ಲಿ 'ನಾವು' ಎಂಬ ಪದವು ಒಟ್ಟಾರೆ ಸ್ತ್ರೀ ಕುಲವನ್ನು ಪ್ರತಿನಿಧಿಸಿದರೆ, 'ಅವರಂತಲ್ಲ' ಎಂಬ ಪದವು ಅಧಿಕಾರಸ್ಥರಾಗಿದ್ದುಕೊಂಡು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಜನಸಾಮಾನ್ಯರ ನೈತಿಕತೆಯನ್ನು ಮತ್ತು ಸಂಪತ್ತನ್ನು ಕೊಳ್ಳೆ ಹೊಡೆಯುತ್ತಿರುವ ಮಂದಿಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಬರುವ ಒಂದಿಷ್ಟು ಮಂದಿಗೆ ಇತಿಹಾಸದಲ್ಲಿ ದಾಖಲಾಗುವ ಬಗ್ಗೆ ತಿರಸ್ಕಾರವಿದೆ. ಆದರೆ ಇತಿಹಾಸವನ್ನು ಸೇರದಿರುವ ಕುರಿತಂತೆ ಇವರಿಗೆ ವಿಷಾದವಿಲ್ಲ. ಇಲ್ಲಿ ಪ್ರಸ್ತಾಪಮಾಡಿರುವ ಸಂಗತಿಗಳನ್ನು ಕವಿತೆಯ ಈ ಸಾಲುಗಳು ಧ್ವನಿಸುತ್ತಿವೆ.

"ಕ್ಷಮಿಸಿಬಿಡು ಪ್ರಭುವೆ
ನಾವು ಅವರಂತಲ್ಲ
ಅವರಂತಿಲ್ಲದ್ದಕ್ಕೆ" ಖೇದವೂ ಇಲ್ಲ.
ನಾವು ಚದುರಂಗವಾಡುವುದಿಲ್ಲ
ನಮಗಾಟ ಬರುವುದಿಲ್ಲ
ಕಲಿಯುವುದೂ ಇಲ್ಲ
ಅದು ನಮಗಿಷ್ಟವೂ ಇಲ್ಲ
.......................................
ನಾವು ಹೀಗೆಯೇ ನೋವು ಹಾಡುತ್ತೇವೆ
ಆಟವಾಡದೆಯೂ ಜೀವಂತವಿರುತ್ತೇವೆ.
ಚರಿತ್ರೆಯಾಗದೆಯೂ ವರ್ತಮಾನದಲ್ಲಿರತ್ತೇವೆ!"[೧೧] (ನಾವು ಅಂತವರಲ್ಲ)

'ಕಡಲಿಗೆಷ್ಟೊಂದು ಬಾಗಿಲು' ಕೃತಿಯ ಮತ್ತೊಂದು ಪ್ರಮುಖ ಕವಿತೆಯಾದ 'ತಥಾಗತ'ದಲ್ಲಿ ಸಾಮಾಜಿಕವಾಗಿ ಜನರ ವಿಭಿನ್ನ ವ್ಯಕ್ತಿತ್ವಗಳನ್ನು ಕಂಡರಿಸುತ್ತಾರೆ. ವಾಸ್ತವಿಕ ನೆಲೆಗಟ್ಟನ್ನು ಮೀರಿ ಸುಳ್ಳೇ ಸತ್ಯವೆಂದು ಭ್ರಮಿಸಿ ಬದುಕುತ್ತಿರುವ ಜನಗಳ ಅಂತರಂಗದ ವಿಕಾರಗಳನ್ನು ಈ ಕವಿತೆಯು ದಾಖಲಿಸುತ್ತದೆ. ಉದಾಹರಣೆಗೆ ಮುಖವಾಡದ ಮುಖಗಳು/ಹಿರಿದು ನಿಂತ ನಖಗಳು/ಹೆಸರೇ ಇರದ ಸುಖಗಳು/ಎದುರಾದವು ಕವಿತೆಗೆ/ಪ್ರೀತಿಯಿರದ ಕಪಟ ಸಂಬಂಧ/ನೀತಿಯಿರದ ಬಣ್ಣ ಬೆಡಗು/

ಕೃತಕತೆಯ ಮಿಥ್ಯ ಬೆರಗು . . . . ಹೀಗೆ ವ್ಯಕ್ತಿಗಳ ಒಳ ಮತ್ತು ಹೊರ ಮುಖಗಳನ್ನು ಕವಿತೆಯು ಸೃಜಿಸುತ್ತದೆ.

ಹೀಗೆ, ರೂಪಹಾಸನ ಅವರ ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆ ಎನ್ನುವುದು ಒಂದು ಪ್ರಬಲ ಜೀವಂತ ಸೆಲೆಯಾಗಿದ್ದು, ಹತ್ತಾರು ಕವಿತೆಗಳಲ್ಲಿ ಕವಯಿತ್ರಿಯವರ ಸಮಕಾಲೀನ ಮನೋಧೋರಣೆ ಅನಾವರಣಗೊಳ್ಳುತ್ತದೆ. ಭೂತಕಾಲದ ಭಾವನೆಗಳಿಗೆ ಸಿಕ್ಕಿ ನರಳುವ ಸ್ತ್ರೀ ಸ್ವಾತಂತ್ರ್ಯವನ್ನು ಮುಕ್ತಗೊಳಿಸಿ ಸಾಮಾಜಿಕ ನೆಲೆಗಟ್ಟಿನ ಮೇಲೆ ಸ್ತ್ರೀ ಪುರುಷರ ಹಕ್ಕುಗಳನ್ನು ಮುಖಾಮುಖಿಯಾಗಿಸುವ ದೃಶ್ಯಗಳೇ ರೂಪಾ ಹಾಸನ ಅವರ ಹಲವು ಕವನಗಳ ಜೀವಾಳ. ಶೋಷಣೆಗೊಳಗಾದವರ, ಅನ್ಯಾಯಕ್ಕೆ ಬಲಿಯಾದವರ, ಸುಳ್ಳು ಸಂಪ್ರದಾಯಗಳ ಬಂಧನಕ್ಕೊಳಗಾದವರ, ಧ್ವನಿಯಾಗುವ ಇಲ್ಲಿನ ಕವಿತೆಗಳಿಗೆಲ್ಲಾ, 'ಒರೆಸಿಕೋ ಕಣ್ಣೀರು ನನ್ನವಳೇ/ಎಲ್ಲೆಡೆ ಹಬ್ಬಲಿ ಹೊಸ ಕಥೆ' ಎಂಬ ಕವಿತೆಯ ಸಾಲುಗಳೇ ಬಂಡವಾಳ.

ಒಟ್ಟಾರೆ, ರೂಪ ಅವರ ಕಡಲಿಗೆಷ್ಟೊಂದು ಬಾಗಿಲು' ಕೃತಿಯ ಕವಿತೆಗಳಲ್ಲಿ ಅಭಿವ್ಯಕ್ತಗೊಂಡಿರುವ ಸಾಮಾಜಿಕ ಆಯಾಮಗಳನ್ನು ಕುರಿತು ಶ್ರೀ ಸೈಯದ್ ಝುಮೀರುಲ್ಲಾ ಷರೀಫ್ ಅವರ ಮಾತುಗಳಲ್ಲಿ ಹೇಳುವುದಾದರೆ "ರೂಪಾ ತಮ್ಮ ಕವಿತೆಗಳ ಮೂಲಕ ನೋವುಣ್ಣುತ್ತಿರುವ ಹೆಣ್ಣಿನ ಹೃದಯದ ಬಾಗಿಲು ತೆರೆದು ತೋರಿಸುತ್ತಾ ಅವರಿಗೆಲ್ಲಾ 'ತಮ್ಮಲ್ಲಿರುವ ಹೊಸ ಪಟ್ಟುಗಳ' ಅರಿವು ಮೂಡಿಸಿ, 'ಬಳ್ಳಿಗೆ ಮರವೇ ಆಸರೆಯಾಗಬೇಕೆ?' ಎಂಬ ಧೈರ್ಯ ತುಂಬುವ ಪ್ರಯತ್ನದೊಂದಿಗೆ ಸ್ತ್ರೀ ವಿಮೋಚನೆಯ ಸೂತ್ರಗಳನ್ನು ನೀಡಿದ್ದಾರೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಗೆ ಸವಾಲಾಗುವ 'ರೂಪರೂಪಗಳನು ದಾಟಿ', 'ನಿರಾಕರಣ', 'ಹೂ ಬೆಂಕಿ', 'ಜೋಕರು', 'ಪ್ರತಿಫಲ' ಮೊದಲಾದ ಕವಿತೆಗಳು ಸಾಮಾಜಿಕ ಬದಲಾವಣೆಯನ್ನು ಬಯಸುತ್ತವೆ".[೧೨]

'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕೃತಿಯು ರೂಪ ಹಾಸನ ಅವರ ಒಂದು ವಿಶಿಷ್ಟಪೂರ್ಣವಾದ ಸೃಜನಶೀಲ ಉತ್ಪನ್ನವಾಗಿದೆ. ಇಲ್ಲಿ 'ಹಸಿವು' ಮತ್ತು 'ರೊಟ್ಟಿ'ಯನ್ನು ಕೇಂದ್ರವಾಗಿಸಿಕೊಂಡು, ಅವುಗಳ ಸುತ್ತ ಹೆಣೆಯಲ್ಪಟ್ಟಿರುವ ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕಾರಣದ ಸಂಗತಿಗಳನ್ನು ಇಲ್ಲಿ ಬರುವ ಕಿರುಪದ್ಯಗಳು ಪರಿಣಾಮಕಾರಿಯಾಗಿ ಪ್ರಕಟಿಸುತ್ತವೆ. ಸಮಾಜವನ್ನು ಕಾಡುತ್ತಿರುವ ಹಸಿವು ಒಂದೆಡೆಯಾದರೆ, ಆ ಹಸಿವನ್ನು ನೀಗಿಸಿಕೊಳ್ಳಲು ಜನಸಾಮಾನ್ಯರು ಮಾಡುವ ಪ್ರಯತ್ನಗಳ ನಡುವೆ ಇಲ್ಲಿನ ಪದ್ಯಗಳು ಮೈದಳೆಯುತ್ತವೆ. 'ಹಸಿವು' ಮತ್ತು 'ರೊಟ್ಟಿ', ಈ ಎರಡು ರೂಪಕಗಳ ಮುಖೇನ ವಿಭಿನ್ನ ವಸ್ತು, ಧ್ವಂಧ್ವತೆಯನ್ನು ಲೇಖಕರು ಸೆರೆಹಿಡಿಯುತ್ತಾರೆ. ಎಷ್ಟು ತಿಂದರೂ ಮುಗಿಯದ ಹಸಿವು, ಹಸಿವನ್ನು ನೀಗಿಸುವ ಶಕ್ತಿಯನ್ನು ಹೊಂದಿರುವ ರೊಟ್ಟಿ, ಈ ಎರಡು ಸಂಗತಿಗಳು ಈ ಕೃತಿಯ ಜೀವಾಳವಾಗಿವೆ. ಕೃತಿಯಲ್ಲಿ 'ಹಸಿವು' ಮತ್ತು 'ರೊಟ್ಟಿ' ವಿಚಾರಗಳು ಮಾತ್ರವಲ್ಲದೆ, ಹೆಣ್ಣು – ಗಂಡು,

ಲೌಕಿಕ – ಅಲೌಕಿಕ ಜಾತಿಯ ತರ – ತಮ, ಅಧಿಕಾರಿ – ಅಧೀನ, ಅಪ್ಪ – ಮಗ, ಗುರು – ಶಿಷ್ಯ, ಆದಿ – ಅಂತ್ಯ ಇತ್ಯಾದಿ ವೈರುಧ್ಯಗಳನ್ನು ಒಳಗೊಂಡಿದ್ದು, ವಿಭಿನ್ನ ಸಾಮಾಜಿಕ ಸ್ತರಗಳಲ್ಲಿ 'ಹಸಿವು' ಮತ್ತು 'ರೊಟ್ಟಿ' ಒಳಗೊಂಡಿರುವ ಪ್ರಪಂಚವನ್ನು ಒಟ್ಟಾರೆ ಕೃತಿಯು ಪ್ರತಿಧ್ವನಿಸುತ್ತದೆ. (ಉದಾಹರಣೆಗಾಗಿ ಎರಡು ಪದ್ಯಗಳು)

"ಹಸಿವಿನ ಸಂತೆಯಲಿ
ಬಿಕರಿಗೆ ಬಿದ್ದಿದೆ ರೊಟ್ಟಿ
ವಿಭಿನ್ನ ಬೆಲೆ
ಕೊಳ್ಳುವುದು ಅವರವರ ಅರ್ಹತೆ
ರೊಟ್ಟಿ ಬೆಲೆಯುಳ್ಳ
ನಿರ್ಜೀವ ಸಾಮಗ್ರಿ"[೧೩]

"ಹಸಿವು ಬ್ರಹ್ಮಾಂಡ ವ್ಯಾಪಿಸಿ
ದಾಪುಗಾಲಿಟ್ಟು ನಡೆಯುತ್ತದೆ.
ನಿಶ್ಚಲ ರೊಟ್ಟಿ
ಇದ್ದಲ್ಲೆ ನೂರು
ನಡೆ ಇಡುತ್ತದೆ
ಸದ್ದಿಲದೇ ಸಂಭವಿಸುತ್ತದೆ"[೧೪]

ಒಟ್ಟಾರೆ, ಕ್ರೋಢೀಕರಿಸಿ ಹೇಳುವುದಾದರೆ ರೂಪಾರವರ ಕವಿತೆಗಳಲ್ಲಿ ಸ್ತ್ರೀ ಸಂವೇದನೆ ಎಷ್ಟು ಮುಖ್ಯವಾಗಿ ಅಭಿವ್ಯಕ್ತಿಗೊಂಡಿದೆಯೋ, ಅದರ ಜೊತೆಯಲ್ಲಿಯೇ ವಿಭಿನ್ನ ಸಾಮಾಜಿಕ ಆಯಾಮಗಳಲ್ಲಿ ಇಲ್ಲಿನ ಅನೇಕ ಕವನಗಳು ಗರಿಬಿಚ್ಚಿಕೊಂಡಿವೆ. ಸ್ವತಃ ಸಮಾಜಸೇವಕರಾಗಿರುವ ಲೇಖಕರು ತಾವು ಕಂಡುಂಡ ಅನುಭವಗಳನ್ನು, ಪಡೆದ ಸಂವೇದನೆಗಳನ್ನು, ಅನುಭವಿಸಿದ ಸನ್ನಿವೇಶಗಳನ್ನು, ಸಮಾಜದ ವಿವಿಧ ಸ್ತರಗಳಲ್ಲಿ ನಿಂತು ನೋಡುವ ಅವರ ಒಳನೋಟ ಅಪೂರ್ವವಾಗಿದೆ. ತನ್ನ ಸೃಜನಶೀಲ ಶಕ್ತಿಯಿಂದ ಪ್ರಸಕ್ತ ವಿದ್ಯಮಾನಗಳನ್ನು ಗ್ರಹಿಸಿ, ಅವುಗಳನ್ನು ಕಾವ್ಯದ ಗರಡಿಯಲ್ಲಿ ಪಳಗಿಸುವ ಮುಖೇನ 'ಜೀವನದ ವಿಮರ್ಶೆಯೇ ಸಾಹಿತ್ಯ' ಎಂಬುದನ್ನು ಸಾಕ್ಷಾತ್ಕಾರಗೊಳಿಸಿದ್ದಾರೆ.

**ಕೊನೆಟಿಪ್ಪಣಿಗಳು :**


೧. ಜಿ.ಎಸ್.ಎಸ್.ರವರ ಸಮಗ್ರ ಗದ್ಯ ಸಂಪುಟ, ಪುಟ. ೩.

೨. ಒಂದಿಷ್ಟು ಹಸಿಮಣ್ಣು – ರೂಪ ಹಾಸನ, ಪುಟ. ೨೬, ಸಿರಿವರ ಪ್ರಕಾಶನ, ಬೆಂಗಳೂರು (೨೦೦೦).

೩. ಒಂದಿಷ್ಟು ಹಸಿಮಣ್ಣು – ರೂಪ ಹಾಸನ, ಪುಟ. ೪೪, ಸಿರಿವರ ಪ್ರಕಾಶನ, ಬೆಂಗಳೂರು, (೨೦೦೦).

೪. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ. ೩. ಸಿರಿವರ ಪ್ರಕಾಶನ, ಬೆಂಗಳೂರು, (೨೦೦೦).

೫. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ. ೪೯, ಸಿರಿವರ ಪ್ರಕಾಶನ, ಬೆಂಗಳೂರು, (೨೦೦೦).

೬. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ. ೪೯, ಲೋಹಿಯಾ ಪ್ರಕಾಶನ, ಬಳ್ಳಾರಿ (೨೦೦೫).

೭. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ. ೨೫, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

೮. 'ಕಡಲಿಗೆಷ್ಟೊಂದು ಬಾಗಿಲು' ಮುನ್ನುಡಿಯಿಂದ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

೯. ಬಾಗಿಲಾಚೆಯ ಮೌನ, ರೂಪ ಹಾಸನ, ಪುಟ. ೫, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫.

೧೦. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ. ೫೧, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

೧೧. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ. ೫೫, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

೧೨. 'ಪ್ರಜಾವಾಣಿ' ದಿನಪತ್ರಿಕೆಯ 'ಸಾಪ್ತಾಹಿಕ ಪುರವಣಿ'ಯಲ್ಲಿ ದಿನಾಂಕ ೧೬.೦೫.೨೦೧೦.

೧೩. ಗಳಿಗೆ ಬಟ್ಟಲ ತಿರುವುಗಳಲ್ಲಿ, ರೂಪ ಹಾಸನ, ಪುಟ. ೫೨, ಸಿರಿವರ ಪ್ರಕಾಶನ, ಬೆಂಗಳೂರು, ೨೦೧೦.

೧೪. ಗಳಿಗೆ ಬಟ್ಟಲ ತಿರುವುಗಳಲ್ಲಿ, ರೂಪ ಹಾಸನ, ಪುಟ. ೨೪, ಸಿರಿವರ ಪ್ರಕಾಶನ, ಬೆಂಗಳೂರು, ೨೦೧೦.

ಅಧ್ಯಾಯ – ೪

## "ರೂಪ ಹಾಸನ ಅವರ ಕವಿತೆಗಳಲ್ಲಿ ಬಳಕೆಯಾಗಿರುವ ರೂಪಕಗಳು – ಪ್ರತಿಮೆಗಳು"

ಕವಿಯ ಕಾವ್ಯಾಭಿವ್ಯಕ್ತಿ ಮಾಧ್ಯಮದ ಸಂವಹನದಲ್ಲಿ ರೂಪಕಾಲಂಕಾರಗಳು ಎಷ್ಟು ಮುಖ್ಯವೋ ಅಷ್ಟೇ ಪ್ರಮಾಣದಲ್ಲಿ ಪ್ರತಿಮೆಯು ಮುಖ್ಯವಾದುದು. ಕಾವ್ಯದ ಭಾಷಾ ಅಭಿವ್ಯಕ್ತಿ ಸಾಧನೆಗಳಲ್ಲಿ ಇದರ ಮಹತ್ವ ಉತ್ಕೃಷ್ಟವಾದುದು. ಇದೊಂದು ರೀತಿಯಲ್ಲಿ ಅಲಂಕಾರಗಳ ಧ್ವನಿಶಕ್ತಿಯ ಸಂಕೇತವಾಗಿರುತ್ತದೆ. ಆಧುನಿಕ ಸಾಹಿತ್ಯ ನಿರ್ಮಿತಿಯ ಸಂದರ್ಭದಲ್ಲಿ 'Image' ಎನ್ನುವ ಇಂಗ್ಲೀಷ್ ಪದಕ್ಕೆ ಸಂವಾದಿಯಾಗಿ 'ಪ್ರತಿಮೆ' ಪದವನ್ನು ಕನ್ನಡದಲ್ಲಿ ಬಳಸಲಾಗುತ್ತದೆ. ಇದು ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ ವಲಯದಲ್ಲಿ ಈ 'ಇಮೇಜ್' ಎಂಬ ಪರಿಕಲ್ಪನೆ ಹೆಚ್ಚು ಪ್ರಚಲಿತವಾದ ಪದವಾಗಿದೆ. ಪಾಶ್ಚಾತ್ಯರಲ್ಲಿ 'ಇಮೇಜ್' ಎನ್ನುವುದು ಕಾವ್ಯಾಭಿವ್ಯಕ್ತಿಯ ವಿಶಿಷ್ಟ ವಿಧಾನವಾಗಿದೆ. ದೀರ್ಘವಾದ ಹಲವು ಸಾಲುಗಳ ಪದ್ಯದ ಸಾಲುಗಳನ್ನು ಕೇವಲ ಒಂದೇ ಒಂದು ಶಬ್ದ ಚಿತ್ರದ ಸಂಕೇತದ ಮೂಲಕ ಹಿಡಿದಿಡುವ ಅಭಿವ್ಯಕ್ತಿ ವಿಧಾನವೇ ಈ ಪ್ರತಿಮೆ ಎಂಬುದು. ಕವಿಯು ತನ್ನ ಮನಸ್ಸಿನಲ್ಲಿರುವ ಅನುಭವಗಳನ್ನು ಲೋಕಾನುಭವಗಳೊಂದಿಗೆ ಬೆರಸಿ, ಹದಗೊಳಿಸಿ, ಇವೆರಡರ ಅನುಭವ ವಿಶೇಷಗಳಿಂದ ಶಬ್ದ ಚಿತ್ರ ಸ್ವರೂಪದಲ್ಲಿ ಆಕಾರ ಕೊಡುತ್ತಾನೆ. ಹಾಗಾಗಿ ಪ್ರತಿಮೆ ಎಂಬುದು ಒಂದು ರೀತಿಯಲ್ಲಿ ಕವಿಯ ಕಾವ್ಯದ ಆಕೃತಿಯಾಗಿರುತ್ತದೆ. ಕವಿಯ ಮನಸ್ಸು ಕಾವ್ಯ ವ್ಯಾಪಾರದ ಬಹು ಮುಖ್ಯ ಉತ್ಪನ್ನವಾಗಿದೆ. ಮನಃಶಾಸ್ತ್ರದ ಪ್ರಕಾರ ಪ್ರತಿಮೆ ಎಂದರೆ ಹಿಂದೆಂದೋ ಪಟ್ಟ ಇಂದ್ರಿಯಾನುಭವವೊಂದರ ನೆನಪು ಮಾಡಿಕೊಳ್ಳುವಿಕೆ ಅಥವಾ ಪುನರ್ ನಿರ್ಮಿತಿಯಾಗಿರುತ್ತದೆ. ಡಾ. ಜಿ.ಎಸ್.ಎಸ್. ಅವರು ಕವಿಯ ಕರ್ಮದ ಪ್ರಕ್ರಿಯೆಯಲ್ಲಿ ಪ್ರತಿಮೆಯನ್ನು "ಕವಿ ಈ ಬದುಕಿನ ನಿರಂತರ ಪ್ರವಾಹದ ಯಾವುದೇ ಒಂದು ಸಂದರ್ಭವನ್ನು, ಆ ಸಂದರ್ಭದ ಸಮಸ್ತ ಸಂಕೀರ್ಣತೆಯೊಂದಿಗೆ ತಕ್ಕ ಶಬ್ದ ಚಿತ್ರವೊಂದರ ಮೂಲಕ ಆವಿಷ್ಕಾರ ಮಾಡಿ ತೋರಿಸುತ್ತಾನೆ. ಇದು ಪ್ರತಿಮೆ ಎನ್ನುವುದು".[೧] ಹೀಗಾಗಿ ಕವಿಯ ಭಾವನಾತ್ಮಕವಾದ ನೆಲೆಯಲ್ಲಿ ಶಬ್ದ ಚಿತ್ರ ಹುಟ್ಟಿ ಘಟನೆಯೊಂದರ ಸಂದರ್ಭಕ್ಕೆ ಅನುಗುಣವಾಗಿ ಅನುಭವದ ಉತ್ಕೃಷ್ಟವಾದ ತೀವ್ರತೆಯನ್ನು ಧ್ವನಿಶಕ್ತಿಯ ರೂಪಕದಲ್ಲಿ ಕಟ್ಟಿಕೊಡುವ ಸ್ವರೂಪದ್ದಾಗಿರುತ್ತದೆ ಹಾಗಾಗಿಯೇ ಪ್ರತಿಮೆಯ ವಿಶಿಷ್ಟ ಲಕ್ಷಣ ಅದೊಂದು ಶಬ್ದ ಚಿತ್ರವಾಗಿದ್ದು, ಸಂಕ್ಷಿಪ್ತವಾಗಿರುತ್ತದೆ. ಇದು ಬದುಕಿನ ಭಾವ ತೀವ್ರತೆಯನ್ನು ಹಿಡಿದಿಟ್ಟು, ಹೊಸ ಅರ್ಥ ಸಂಚಯಗಳನ್ನು ಕಣ್ಣಿಗೆ ಕಟ್ಟುವಂತೆ ಹೊಳೆಸುತ್ತದೆ.

'ಪ್ರತಿಮೆ' ಎನ್ನುವುದು ಕಾವ್ಯದ ಅಲಂಕಾರಗಳಲ್ಲಿ ಉಪಮೆ, ರೂಪಕಗಳಂತೆ ಕಂಡು ಬಂದರೂ ಇವುಗಳಾಗಚೆಗಿರುವ ಅಭಿವ್ಯಕ್ತಿಯ ಸೃಜನೆಯನ್ನು ಗ್ರಹಿಸಿ ಕಟ್ಟಿಕೊಡುತ್ತದೆ. 'ಪ್ರತಿಮೆ' ಎಂಬ ಪದದ ಅರ್ಥದ ಪ್ರಕ್ರಿಯೆ ವಿಶಾಲವ್ಯಾಪ್ತಿಯಿಂದ ಕೂಡಿದೆ. ಪ್ರತಿಮೆ ಶಬ್ದ ರೂಪದಲ್ಲಿ ಕಟ್ಟಿಕೊಡುವ ಶಬ್ದಚಿತ್ರ ಹೇಗೋ ಹಾಗೆಯೇ ಹಲವು ಬಗೆಯ ಶಬ್ದಚಿತ್ರಗಳ ಒಳಗೊಳ್ಳುವ ಕಲಾವಿಧಾನವಾಗಿ ಕಂಡುಬರುತ್ತದೆ. ಪ್ರತಿಮೆಯು ಬಹಳ ಮುಖ್ಯವಾಗಿ ಕಾವ್ಯ ಕಲೆಯಲ್ಲಿ ಸತ್ಯದ ಸಾಕ್ಷಾತ್ಕಾರ ಹೊರಹೊಮ್ಮಿಸುವ ವಿಧಾನವಾಗಿದೆ. ಇದು ಕವಿಯ ಸೂಕ್ಷ್ಮಗ್ರಾಹಿಯಾದ ಮನಸ್ಸು, ಸಾದೃಶ್ಯ ಮತ್ತು ಹೋಲಿಕೆಗಳ ಸೃಷ್ಟಿ ಜಗತ್ತಿನಲ್ಲಿ ಕಂಡುಕೊಳ್ಳುವ ಹೊಸ ವಿಧಾನ. ಹಾಗಾಗಿ ಕವಿಯ ಸಂಕೀರ್ಣ ಅನುಭವ ಅಭಿವ್ಯಕ್ತಿಯಾಗಿದೆ. ಪಾಶ್ಚಾತ್ಯ ಸಾಹಿತ್ಯ ವಿಮರ್ಶಕರಾದ ಎಜ್ರಾಪೌಂಡ್ ಪ್ರತಿಮೆಯ ಸ್ವರೂಪವನ್ನು ಕುರಿತು ಹೀಗೆ ಹೇಳುತ್ತಾನೆ. "Image is that which presents an intellectual and emotional complex in an instant of time".[೨] ಈತನ ಮಾತಿನಂತೆ 'ಪ್ರತಿಮೆ ಎನ್ನುವುದು ಕವಿಯ ಪ್ರತಿಭೆ, ಭಾವಶಕ್ತಿಗಳಿಂದ ಒಡಮೂಡಿದ ಅನುಭವದ ನಿರ್ದಿಷ್ಟ ಅವಧಿಯನ್ನು ಅವಲಂಬಿಸಿದ ಅಭಿವ್ಯಕ್ತಿಯಾಗಿರುತ್ತದೆ'. ಉಪಮೆ, ರೂಪಕ ಮೊದಲಾದವುಗಳನ್ನೆಲ್ಲಾ ಒಳಗೊಂಡ ಸಂಕೀರ್ಣ ವ್ಯವಸ್ಥೆಯಾಗಿ ಉಳಿದು ನಿಂತ ಶಕ್ತಿಯ ವಿಶೇಷವಾಗಿದೆ. ಮತ್ತೊಮ್ಮೆ ಪಾಶ್ಚಾತ್ಯ ಚಿಂತಕ ಸಿ.ಡಿ. ಲೂಯಿ ಕಾವ್ಯ ಪ್ರತಿಮೆಯನ್ನು ಕುರಿತು "ಕಾವ್ಯ ಪ್ರತಿಮೆಯನ್ನು ಒಂದು ಶಬ್ದ ಚಿತ್ರ ಎಂದು ಕರೆಯಬಹುದು. ಒಂದು ವಿಶೇಷಣ, ಒಂದು ರೂಪಕ ಅಥವಾ ಒಂದು ಉಪಮಾನ. ಇಂತಹ ಕಾವ್ಯ ಪ್ರತಿಮೆಯನ್ನು ಸೃಷ್ಟಿಸಬಹುದು ಅಥವಾ ಕೇವಲ ವರ್ಣನಾತ್ಮಕ ನಿರೂಪಣೆಯೂ ಕೆಲವು ವೇಳೆ ವಾಸ್ತವ ವರದಿಗಿಂತ ಬೇರೆಯಾಗಿ ಒಂದು ಶಬ್ದ ಚಿತ್ರವನ್ನು ನಿರ್ಮಿಸುವುದರ ಮೂಲಕ ಪ್ರತಿಮೆಯಾಗಬಹುದು"[೩] ಎನ್ನುತ್ತಾನೆ. ಪ್ರತಿಮೆಯ ವಿಧಾನವು ಕಾವ್ಯದ ಗಂಭೀರವಾದ ತೊಡುಗೆಗಳಿದ್ದಂತೆ. ಅವುಗಳ ನಿರ್ಮಿತಿಯೂ ಕಾವ್ಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ.

ರೂಪ ಹಾಸನ ಅವರು ಈವರೆಗೆ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ತೀರ ಇತ್ತೀಚೆಗೆ ತುಂಬಾ ಫ್ರೆಶ್ಶಾಗಿ ಕಾವ್ಯ ರಚನೆ ಮಾಡುವ ಕವಿಯತ್ರಿಗಳಲ್ಲಿ ಇವರೂ ಒಬ್ಬರು. ಕವಿ ತಾನು ಏನನ್ನು ನಿರೂಪಿಸಬೇಕು ಅದನ್ನು ನೇರವಾಗಿ ಹೇಳದೆ ಅನೇಕ ವಸ್ತುಗಳನ್ನು, ಸರಕುಗಳನ್ನು ಆಧಾರವಾಗಿಟ್ಟುಕೊಂಡು ಅವುಗಳಿಗೆ ಅನ್ವಯ ಮಾಡಿ ಸೃಜಿಸುವ ಕಲೆಯನ್ನು ಪ್ರತಿಮಾತ್ಮಕ ವಿಧಾನ ಎಂದು ಸಾಹಿತ್ಯ ವಿಮರ್ಶೆಯಲ್ಲಿ ಪರಿಗಣಿಸಲಾಗುತ್ತದೆ. ಈ ನಿಟ್ಟಿನಲ್ಲಿ ಕವಯಿತ್ರಿ ಅವರು ಪ್ರತಿಮೆಗಳನ್ನು ಕಟ್ಟಿಕೊಡುವಲ್ಲಿ ತಮ್ಮ ಸೃಜನಶೀಲ ಪ್ರಜ್ಞೆಯನ್ನು ಅತ್ಯಂತ ಸಹಜವಾಗಿಯೇ ಪ್ರಕಟಿಸಿದ್ದಾರೆ. ಕನ್ನಡಿ, ಕಣ್ಣಾಪು, ಬೊನ್ಸಾಯಿ, ಭತ್ತ – ಅಕ್ಕಿ, ಸೂಜಿ – ದಾರ, ಗಾಳಿಪಟ, ಗಿಡ, ಮರ, ಬಳ್ಳಿ, ಕಡಲು, ಬಾಗಿಲು, ಹೊಸಲು, ಮೌನ, ಸಂತೆ, ಮಣ್ಣು – ಹೀಗೆ ನೂರಾರು ವಸ್ತುಗಳನ್ನು ಬಳಸಿಕೊಂಡು ಅವುಗಳಿಗೆ ಜೀವ ತುಂಬಿ ಕಲೆಯ ಮೆರಗು ನೀಡಿ ಕಾವ್ಯಗುಣ ತುಂಬಿ ಬನಿಯುಳ್ಳ ಭಾಷೆಯಲ್ಲಿ

ಪ್ರತಿಮೆಗಳನ್ನು ಕಡಿಯುವಲ್ಲಿ ರೂಪ ಹಾಸನ ಅವರು ಸಿದ್ಧಹಸ್ತರು. ಕನ್ನಡ ವಿಮರ್ಶಾ ಜಗತ್ತು ಕೂಡ ಇವರನ್ನು ಈ ನೆಲೆಯಲ್ಲಿ ಗುರುತಿಸಿದೆ.

ರೂಪ ಹಾಸನ ಅವರು ಬಳಸುವ ಪ್ರತಿಮೆಗಳು ಕೂಡ ಸಾಂಪ್ರದಾಯಿಕ ಪ್ರತಿಮೆಗಳಿಗಿಂತ ಭಿನ್ನವಾಗಿ ಅರ್ಥವನ್ನು ಕೊಡುತ್ತವೆ. ರಂಗೋಲಿ, ಸೂಜಿ, ಕನ್ನಡಿ, ಗಾಳಿಪಟ ಇವೆಲ್ಲಾ ಈ ಬಗೆಗಿನ ಹೊಸ ಪ್ರತಿಮೆಗಳಾಗಿದ್ದು, ಕೇವಲ ಪ್ರತಿಬಿಂಬವಾಗಿ ಉಳಿಯದೆ ಬಿಂಬವಾಗುವ ಕಡೆಗೆ ತುಡಿಯುತ್ತದೆ. ರೂಪಾರ ಕವಿತೆಯಲ್ಲಿ ತುಂಟತನ, ಲವಲವಿಕೆ, ಹಾಸ್ಯ ಪ್ರಜ್ಞೆಗಳು ಇವೆ. ಗಿಡ್ಡ 'ಬೊನ್ಸಾಯಿ ರಾಣಿ'ಯ ರಾಣಿಯನ್ನು ವಿಶ್ವಸುಂದರಿ ಸ್ಪರ್ಧೆಗೆ ಸಿದ್ಧವಾಗುವ ಹುಡುಗಿಗೆ ಹೋಲಿಸಿ ಬರೆದ ಕವಿತೆ ತುಂಟತನದ ಜೊತೆಗೆ ಇಡೀ ನಾಗರೀಕತೆಯ ಬಗ್ಗೆ ಒಂದು ಸೂಕ್ಷ್ಮ ಸಂವೇದನಾ ಮನಸ್ಸು ಮಾಡಿದ ಟೀಕೆಯೂ ಆಗಿದೆ.

ಕವಯತ್ರಿ ಅವರು ಮೇಲೆ ವಿವರಿಸಿದಂತೆ ತಮ್ಮ ಕಾವ್ಯ ಸೌಂದರ್ಯವನ್ನು ಹೆಚ್ಚಿಸಲು, ವಿಭಿನ್ನ ಅರ್ಥ ಸಾಧ್ಯತೆಗಳನ್ನು ವಿಸ್ತರಿಲು, ಬ್ರಹ್ಮಾಂಡದಷ್ಟು ವಿಷಯವನ್ನು ಸರಳ ಪದಗಳಲ್ಲಿ ಸೆರೆ ಹಿಡಿಯಲು ರೂಪಕಗಳನ್ನು – ಪ್ರತಿಮೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವ ಮುಖೇನ ಕವಿತೆಗಳಲ್ಲಿನ ಲಾಲಿತ್ಯವನ್ನು, ಚೆಲುವನ್ನು, ಅನನ್ಯ ಶೋಧೆಯನ್ನು ಹೆಚ್ಚಿಸಿದ್ದಾರೆ. ಪ್ರತಿಮೆಗಳನ್ನು ನಿರ್ಮಿಸುವುದೆಂದರ ಲೇಖಕರಿಗೆ ನಿರರ್ಗಳವಾದ, ಸುಲಲಿತವಾದ ಒಂದು ಸಾಮಾನ್ಯ ಕ್ರಿಯೆಯಂತೆ ಇವರ ಕಾವ್ಯದ ಉದ್ದಗಲಕ್ಕೂ ಕಂಡುಬರುತ್ತದೆ. ಉದಾಹರಣೆಗೆ ಬಾಗಿಲಾಚೆಯ ಮೌನದಲ್ಲಿ "ಹೊಸಿಲನ್ನೇ ಗಡಿರೇಖೆಯ ರೂಪಕವಾಗಿಸುವ ರೂಪ ಹಾಸನ ಅವರು ಹೊಸಿನ ಒಳಗಿನ ಅನೇಕ ವಸ್ತುಗಳನ್ನು ರೂಪಕಗಳಾಗಿ ಬಳಸುತ್ತಾರೆ. ಕಾದೆಣ್ಣೆಗೆ ಬಿದ್ದರೂ ಸಿಡಿಯಲಾಗದ ಚೀಕಲು ಸಾಸಿವೆ, ಪುಟ್ಟ ಬೋಸಿಯಿಂದ ಉಕ್ಕಿ ದೊಡ್ಡ ನದಿಯಾಗುವ ದೋಸೆ ಹಿಟ್ಟು, ಶತಮಾನಗಳಿಂದ ಉರಿಯುತ್ತಲೇ ಇರುವ 'ಅಗ್ನಿ ಕುಂಡ', ಕೊತ ಕೊತನೆ ಕುದಿದ ನೀರು, ಸದ್ದಿಲ್ಲದೆ ಉಕ್ಕುವ ಹಾಲು, ಹೆಣ್ಣೊಬ್ಬಳ ದೈನಂದಿನ ಮರುಹುಟ್ಟನ್ನು ಧ್ವನಿಸುವ ಮಸಿ ಬಟ್ಟೆ ಇತ್ಯಾದಿ ವಸ್ತುಗಳು ಇಲ್ಲಿ ರೂಪಕಗಳಾಗುತ್ತವೆ". ಇವರ ಅನೇಕ ಕವಿತೆಗಳಲ್ಲಿ ಅಡುಗೆ ಮನೆಯ ಸಾಮಾಗ್ರಿಗಳು, ಆಹಾರ ಧಾನ್ಯಗಳು ರೂಪಕಗಳಾಗಿ ಮೈದಳೆಯುತ್ತವೆ. ಪ್ರತಿಮೆಗಳಾಗಿ ನಿಂತು ಕಾವ್ಯದ ಲವಲವಿಕೆಯನ್ನು, ಚುಂಬನ ಶಕ್ತಿಯನ್ನು, ಅರ್ಥವಲಯಗಳ ಆಳ – ಅಗಲಗಳನ್ನು ಬದುಕಿನಾಚೆಯ ತಾತ್ವಿಕ ವಿಚಾರಗಳನ್ನು, ಸ್ತ್ರೀ ಮನದಾಳದ ಬೇಗುದಿಯನ್ನು, ಅದೇ ಸಂದರ್ಭದಲ್ಲಿ ಸ್ತ್ರೀ ಕುಲದ ಅಸ್ಮಿತೆಯನ್ನು, ಸಹೃದಯರ ಮನಸ್ಸು ಅರಳುವಂತೆ ಪರಿಣಾಮಕಾರಿಯಾಗಿ ಪ್ರಕಟಿಸುತ್ತವೆ. ಡಿ.ಎಸ್. ರಾಮಸ್ವಾಮಿ ಅವರು ಅಭಿಪ್ರಾಯಪಡುವಂತೆ "ಬಾಗಿಲಾಚೆಯ ಮೌನ' ಎನ್ನುವ ಶೀರ್ಷಿಕೆಯನ್ನು ಗಮನಿಸಿದರೆ ಕವಯಿತ್ರಿ ಕನ್ನಡಕ್ಕೊಂದು ಹೊಸ ರೂಪಕವನ್ನು ಕೊಟ್ಟಂತೆನಿಸುತ್ತದೆ. ಬಾಗಿಲು, ಆಚೆ ಮತ್ತು ಮೌನ ಎಂಬ

ಮೂರು ಬೇರೆ ಬೇರೆ ಪದಗಳನ್ನು ಬಳಸಿ ಸೃಷ್ಟಿಯಾಗಿರುವ ಈ ಹೊಸ ರೂಪಕ 'ಬಾಗಿಲು' ಎಂದರೆ ಮಿತಿ, 'ಆಚೆ' ಎಂದರೆ ಪರಿಧಿಯನ್ನು ಮೀರುವ ಮತ್ತು 'ಮೌನ' ಎಂದರೆ ಸಮ್ಮತಿ ಎನ್ನುವ ಅರ್ಥದಲ್ಲಿ ಅವಲೋಕಿಸಿದಾಗ ಮಿತಿಯ ಪರಿಧಿಯನ್ನು ಮೀರುವ ಹೆಬ್ಬಯಕೆಯನ್ನು ಪ್ರಕಟಿಸುತ್ತಿರುವುದರ ಕುರುಹಾಗಿ ತೋರುತ್ತದೆ. ಬಿಸಿಲು ಮಳೆ ಚಳಿಗಾಳಿಗೆ/ಹಿಗ್ಗದೆ ಕುಗ್ಗದೆ/ಎಲ್ಲಿಯೂ ಲೆಕ್ಕಕ್ಕೆ ಸಿಗದೆ/ಯಾರಿಗೂ ವೇದ್ಯವಾಗದೆ/ಇದ್ದು ಬಿಡಬೇಕು/ನಿನ್ನಂತೆ/ ಇದ್ದರೂ ಇರದಂತೆ (ಇದ್ದರೂ ಇರದಂತೆ) ಈ ಸಾಲುಗಳನ್ನಷ್ಟೇ ಓದಿಕೊಂಡರೆ, ಯಾವುದೋ ಮಹತ್ವದ ವ್ಯಕ್ತಿಯೊಡನೆ ಕವಯಿತ್ರಿ ತನ್ನನ್ನು ಸಮೀಕರಿಸಿಕೊಳ್ಳುವ ಹಾಗೆ ಕಾಣುತ್ತದೆ. ಸಾಮಾನ್ಯ ಪರಿಕರಗಳನ್ನೇ ಪ್ರತಿಮೆಯಾಗಿಸುವ ರೂಪ ಇಲ್ಲಿ ಬಳಸಿಕೊಂಡಿರುವುದು ಬಟ್ಟೆಯೊಣಗಿಸುವ ಸಾಮಾನ್ಯ ತಂತಿಯನ್ನು ಹಸಿ ಬಟ್ಟೆಗಳ ಭಾರಕ್ಕೆ ಜಗ್ಗಿದರೂ ಅವನ್ನೇ ಒಣಗಿಸುವ ಮೂಲಕ ಕೃತಾರ್ಥವಾಗುವ ತಂತಿಯನ್ನು ಪ್ರತಿಮೆಯಾಗಿಸುವುದು ಸೂಕ್ಷ್ಮ ಮನಸ್ಸಿಗೆ ಮಾತ್ರ ಸಿದ್ಧಿಸುವ ಕೆಲಸ. ಹಾಗಾಗಿಯೇ ಕವಿ ಹೇಳುತ್ತಾರೆ – ಇದ್ದು ಬಿಡಬೇಕು ನಿನ್ನಂತೆ/ಇದ್ದರೂ ಇರದಂತೆ/ನಿತ್ಯ ನೆರೆದರೂ ಸಂತೆ/ಇಲ್ಲ ಇಲ್ಲಿ ಚಿಂತೆ".[೪]

'ಕಡಲಿಗೆಷ್ಟೊಂದು ಬಾಗಿಲು' ಸಂಕಲನವೊಂದರಲ್ಲಿ ಬರುವ 'ರೂಪರೂಪಗಳನು ದಾಟಿ' ಅನುಭಾವದ ನೆಲೆಯಲ್ಲಿ ಮೈದಳೆದ ಒಂದು ಸುಂದರ ಅಭಿವ್ಯಕ್ತಿಯಾಗಿದೆ. ಇಲ್ಲಿ ಭತ್ತ, ಅಕ್ಕಿಗಳನ್ನೇ ರೂಪಕವಾಗಿಸಿಕೊಂಡು, ಸೃಷ್ಟಿಯ ಅಸಮತೋಲನವನ್ನು ಕಟ್ಟಿಕೊಡಲಾಗಿದೆ. 'ಭತ್ತ'ವನ್ನು, 'ಗಂಡಿ'ಗೂ, 'ಅಕ್ಕಿ'ಯನ್ನು 'ಹೆಣ್ಣಿ'ಗೆ ಹೋಲಿಸುವ ಮುಖೇನ ದೃಷ್ಟಿಯೊಳಗಿನ ವ್ಯತ್ಯಾಸಗಳನ್ನು, ಸಂಬಂಧಗಳ ಏರಿಳಿತಗಳನ್ನು ಅನಾವರಣಗೊಳಿಸಲಾಗಿದೆ. ಉದಾಹರಣೆಗಾಗಿ

"ತಂದೆ ನಿನ್ನೊಳಗಾವ ಭೇದವೂ ಇಲ್ಲ
ಭತ್ತ ಅಕ್ಕಿಗಳೆರಡೂ ಏಕಜೀವ
ಅದಿಲ್ಲದೇ ಇದಿಲ್ಲ ಇದಿಲ್ಲದೆ ಅದಿಲ್ಲ
ಒಂದೇ ಜೀವ ಎರಡು ಭಾವ
ಮೂಲರೂಪ ಭತ್ತ
ಅದರೊಳಗಣ ರೂಪಕ ಅಕ್ಕಿ

ಹೊಟ್ಟಿನ ಪದರ ಮೂಡೇ ಭತ್ತ
ಹೊಟ್ಟು ಕಳಚಿದೊಡೆ ಅಕ್ಕಿ
ನಡುವೆ ಸುಳಿವಾತ್ಮ
ಭತ್ತವೂ ಅಲ್ಲ, ಅಕ್ಕಿಯೂ ಅಲ್ಲ
ಎರಡೊಳಗೂ ಏಕತ್ವಗೊಂಡ
ಏಕೈಕ ರೂಪ ತಾನೇ ಎಲ್ಲಾ!"[೫] (ರೂಪರೂಪಗಳನ್ನು ದಾಟಿ)

ರೂಪ ಹಾಸನ ಅವರ ಪ್ರಕಟಿತ ನಾಲ್ಕು ಕವನ ಸಂಕಲನಗಳ ಶೀರ್ಷಿಕೆಗಳನ್ನು ಗಮನಿಸಿದಾಗ ಆ ಶೀರ್ಷಿಕೆಗಳು ವಿಶಾಲ ಮನೋಭೂಮಿಕಯೆನ್ನು ವ್ಯಕ್ತಪಡಿಸುವ ಮಹಾ ರೂಪಕಗಳಾಗಿ – ಪ್ರತಿಮೆಗಳಾಗಿ ಶೋಭಿಸುತ್ತವೆ. 'ಒಂದಿಷ್ಟು ಹಸಿಮಣ್ಣು' ಎಂಬುದು ಆರ್ದ್ರಭಾವಗಳ, ಅಂತಃಕರಣದ ಪ್ರೀತಿ, ಸ್ನೇಹಗಳನ್ನು ನಿರೂಪಿಸುವ ರೀತಿಯಲ್ಲಿ ರೂಪಕವಾಗಿ ಒಡಮೂಡಿದೆ. ಇಲ್ಲಿ ಒಂದಿಷ್ಟು ಹಸಿಮಣ್ಣು ದೊರೆತರೆ, ಹೆಣ್ಣಾದವಳು ತನ್ನ ಬದುಕಿನ ಸಾಫಲ್ಯವನ್ನು ಅದರಿಂದಲೇ ಕಂಡುಕೊಳ್ಳುವ ದಿಟ್ಟತನವಿದೆ. 'ಬಾಗಿಲಾಚೆಯ ಮೌನ' ಎನ್ನುವದೂ ಕೂಡ ಒಂದು ವಿಶಿಷ್ಟ ರೂಪಕ ಶಕ್ತಿಯಾಗಿ, ಸಂಗತಿಯನ್ನು ಪ್ರತಿನಿಧಿಸುವ ಸಂಕೇತವಾಗಿದೆ. 'ಕಡಲಿಗೆಷ್ಟೊಂದು ಬಾಗಿಲು' ಎಂಬ ಹೆಸರೇ ವಿಭಿನ್ನ ರೂಪಕಗಳ ಚಿತ್ರವನ್ನು ಕಟ್ಟಿಕೊಡುತ್ತದೆ. ಇಲ್ಲಿ ಇಡೀ 'ಸಮುದ್ರ'ವನ್ನು 'ಮನೆ'ಯೆಂದು ಪರಿಭಾವಿಸಲಾಗಿದೆ. ಬಾಗಿಲು ಎಂದಾಕ್ಷಣ ಕೆಲವರಿಗೆ ಪ್ರವೇಶ ನೀಡುವ; ಮತ್ತೆ ಕೆಲವರಿಗೆ ನಿರ್ಬಂಧಿಸುವ ಕ್ರಿಯೆಯ ಪ್ರತೀಕವಾಗಿ ನಿಲ್ಲುತ್ತದೆ. ಈ ಹಿನ್ನೆಲೆಯಲ್ಲಿ ಡಾ. ಶಂಕರ್ ಅವರು ಅಭಿಪ್ರಾಯಪಡುತ್ತಾ "ಭೂಮಿಗೆಷ್ಟೊಂದು ಬಾಗಿಲು, ಆಕಾಶಕ್ಕೆಷ್ಟೊಂದು ಬಾಗಿಲು"[೬] ಎಂಬುದಾಗಿ ಪ್ರಸ್ತಾಪಿಸುತ್ತಾರೆ. ಈ ಪಟ್ಟಿಗೆ ಮನಸ್ಸಿಗೆಷ್ಟೊಂದು ಬಾಗಿಲು, ಮರಕ್ಕೆಷ್ಟೊಂದು ಬಾಗಿಲು ಎಂಬಿತ್ಯಾದಿಯಾಗಿ ಬಳೆಸಬಹುದಾಗಿದೆ. ಇನ್ನು 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕೃತಿಯು ಕಾಲಚಕ್ರದಲ್ಲಿ ಎದುರಾಗುವ ಸಂಘರ್ಷಗಳಿಗೆ ರೂಪಕವಾಗಿ, ಬದುಕಿನ ದ್ವಂದ್ವಗಳನ್ನು ಧ್ವನಿಸಲು, ಹಸಿವು ಮತ್ತು ರೊಟ್ಟಿಯನ್ನು ವಿಭಿನ್ನ ಆಯಾಮಗಳಲ್ಲಿ ಬಳಸುವ ಮುಖೇನ ವಿಶಿಷ್ಟಪೂರ್ಣ ಪ್ರತಿಮೆಗಳಾಗಿ ಸಂವೇದಿಸಿದ್ದಾರೆ. "ಇಲ್ಲಿನ ಪ್ರತಿಯೊಂದು ಬಿಡಿ ಕವಿತೆಗಳು ತನಗೆ ತಾನೇ ಬಿಡಿಯಾಗಿಯೂ ಇಡಿಯ ಕವಿತೆಗಳ ಭಾಗವಾಗಿದೆ. ಹಾಗೆ ಒಟ್ಟಾಗಿ ಈ ಸಂಕಲನದ ಕವಿತೆಗಳನ್ನು ಓದಿದರೆ; ಇಡಿಯಾಗಿ ರೊಟ್ಟಿ ಮತ್ತು ಹಸಿವಿನ ರೂಪಕಗಳು ಬದುಕಿನ ನಿಗೂಢತೆಯೊಂದಿಗೆ ಸಂಬಂಧಗಳ ವಿವಿಧ ಮುಖಗಳನ್ನು ಅದರ ಚರಿತ್ರೆ ಮತ್ತು ಆತ್ಮಪ್ರತ್ಯಯಗಳೊಂದಿಗೆ ಅನಾವರಣ ಮಾಡುವ ಪ್ರಯತ್ನಗಳಾಗಿವೆ".[೭]

ರೂಪ ಹಾಸನ ಅವರು ತಾವು ಬಳಸಿರುವ ರೂಪಕಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸುತ್ತಾ ಹೇಳುವ ಮಾತುಗಳೆಂದರೆ – "ನಮ್ಮ ಸಮಾಜ ಮತ್ತು ಸಂಸ್ಕೃತಿ ಬಹುಪಾಲು ಪುರುಷ ಕೇಂದ್ರಿತ ಮತ್ತು ಪುರುಷ ನಿರ್ಮಿತ ಆಗಿರುವುದರಿಂದ ಪುರುಷ ದೃಷ್ಟಿಕೋನದಿಂದ ರೂಪಿತವಾಗಿರುವ ರೂಪಕಗಳ ಸುತ್ತಲೇ ಇದುವರೆಗಿನ ನಮ್ಮೆಲ್ಲ ಅಭಿವ್ಯಕ್ತಿಗಳು ಸುತ್ತುತ್ತಿದ್ದವು. ಆದರೆ ಹೆಣ್ಣು ಇವತ್ತೂ ಪ್ರಜ್ಞಾಪೂರ್ವಕವಾಗಿ ಈ ಸಮಾಜ ಮತ್ತು ಸಂಸ್ಕೃತಿಯಲ್ಲಿ ತನ್ನನ್ನು ಒಳಗೊಳ್ಳುವಂತೆ ಒಂದು ಅಂತಃಕರಣದ ನೆಲೆಯಲ್ಲಿ ಇದನ್ನು ಪುನರ್ ರೂಪಿಸುವುದಕ್ಕೆ ಪ್ರಾರಂಭಿಸುತ್ತಾಳೆ. ಪುರುಷ ದೃಷ್ಟಿಯ ಪೊರೆ ಇಲ್ಲದಂತಾ, ತನ್ನ ನೈಜವಾದ ಹೆಣ್ಣಿನ ಕಣ್ಣಿನಿಂದ ಪ್ರಪಂಚದ ಆಗುಹೋಗುಗಳನ್ನು ಅವಲೋಕಿಸುವುದಕ್ಕೆ ಪ್ರಾರಂಭಿಸಿದ್ದಾಳೆ. ಇವತ್ತು ಹೆಣ್ಣು ಅಭಿವ್ಯಕ್ತಿಸುವ ಸಂವೇದನೆಗಳು ತೀವ್ರವೂ, ವಿಸ್ತಾರವೂ, ಆಳವು ಆಗುತ್ತಿದೆ. ಆದರೆ ನಮ್ಮ ಸುತ್ತಲ ಪ್ರಪಂಚ ಅಷ್ಟೇ ಮುಕ್ತವಾಗಿ, ತೀವ್ರವಾಗಿ ಹೆಣ್ಣಿನ

ಬದಲಾದ ಈ ನೆಲೆಯಲ್ಲಿ ಅವಳನ್ನು ಅರ್ಥೈಸಿಕೊಳ್ಳುವುದಕ್ಕೆ ಸಾಧ್ಯವಾಗಿಲ್ಲ. ಬಹುಶಃ ಅಂತಹ ಪಕ್ವತೆ ಕಾಲಕ್ಕೆ ಇನ್ನೂ ಬಂದಿಲ್ಲವೇನೋ! ಹಾಗೆ ಹೇಳಿಕೊಂಡರೆ ನನಗೆ ಸಮಾಧಾನ!"

ಇಂತಹ ಪರಿಸ್ಥಿತಿಯಲ್ಲಿ ಮಹಿಳೆ ತನ್ನ ಸಂವೇದನೆಗಳು ಸಮಾಜಕ್ಕೆ ಅರ್ಥವಾಗಬೇಕೆಂದು ಬಯಸಿದರೂ ಅದನ್ನು ನೇರವಾಗಿ, ಮುಕ್ತವಾಗಿ ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಹೀಗಾಗಿ ಇವತ್ತಿಗೂ ಕೂಡ ರೂಪಕದ ಭಾಷೆಯಲ್ಲಿ ಹೆಣ್ಣು ಮಾತನಾಡುವುದು ಅನಿವಾರ್ಯವಾಗಿದೆ. ಅವಳದ್ದೇ ಪ್ರಪಂಚದ ಹೊಚ್ಚ ಹೊಸ ರೂಪಕಗಳೂ ಅವಳಿಂದ ಸೃಷ್ಟಿಯಾಗುತ್ತಾ ಇವೆ. ಆದರೆ ಆ ರೂಪಕಗಳನ್ನು ಸರಿಯಾಗಿ ಅರ್ಥೈಸದೇ ಹೋದರೆ ಮಹಿಳಾ ಕಾವ್ಯ ಇದುವರೆಗೆ ಕಟ್ಟಿಕೊಡುತ್ತಾ ಬಂದಿರುವಂತಹ ಪ್ರತಿಮೆಗಳು ಯಾವ ಹೊಸ ಹೊಳಹನ್ನೂ ಸಮಾಜಕ್ಕೆ ಕೊಡುವುದಕ್ಕೆ ಸಾಧ್ಯವಿಲ್ಲ. ಪುರುಷ ವಿಮರ್ಶಕರು ಇಂತಹ ರೂಪಕಗಳನ್ನು ತಮ್ಮ ಸಿದ್ಧ ನೆಲೆಯ, ಪೂರ್ವ ನಿರ್ಧಾರಿತ ಚೌಕಟ್ಟಿನಲ್ಲೇ ವಿಶ್ಲೇಷಿಸಲು ಪ್ರಯತ್ನಿಸುತ್ತಾ ಬಂದಿದ್ದಾರೆ. ಹಾಗೆ ಮಹಿಳಾ ವಿಮರ್ಶಕರೂ ಹೆಣ್ಣು ಸೃಷ್ಟಿಸಿದ ಹೊಸ ರೂಪಕಗಳನ್ನು ಪುರುಷ ನಿರ್ಮಿತ ಮತ್ತು ಕೇಂದ್ರಿತ ಮಾದರಿಯಲ್ಲೇ ಹೆಚ್ಚಾಗಿ ವಿವರಿಸುವುದಕ್ಕೆ ಪ್ರಯತ್ನಿಸಿದ್ದಾರೆಯೇ ಹೊರತು ಆ ಮಾದರಿಯನ್ನು ಒಡೆದು ವಿಭಿನ್ನ ಅರ್ಥ ಸಾಧ್ಯತೆಯ ಕಡೆಗೆ, ವಿಸ್ತಾರಗಳೆಡೆಗೆ ಕವಿತೆಯನ್ನು ತೆಗೆದುಕೊಂಡು ಹೋಗಿದ್ದು ತುಂಬಾ ಕಡಿಮೆ. ಅದು ಆದಾಗ ಮಹಿಳೆ ಕಾವ್ಯಕ್ಕೆ ಒಂದು ವಿಶಿಷ್ಟ ಆಯಾಮ ದಕ್ಕುತ್ತೆ ಎನ್ನೋದು ನನ್ನ ಭಾವನೆ.

"ನಾನು ಒಬ್ಬ ಹೆಣ್ಣಾಗಿ ಪ್ರಜ್ಞಾಪೂರ್ವಕವಾಗಿ ಅದರಾಚೆಗೆ ನಿಂತು, ಯಾವುದೇ ಪಕ್ಷಪಾತವಿಲ್ಲದೆ ಈ ರೂಪಕಗಳಲ್ಲಿ ಪ್ರಕೃತಿಯ ನಿಗೂಢಗಳನ್ನು ಸತ್ಯಾನ್ವೇಷಣೆಯ ನೆಲೆಗಟ್ಟಿನಲ್ಲಿ ವಿವಿಧ ಆಯಾಮಗಳನ್ನು ಸೃಷ್ಟಿ ಸ್ವರೂಪಗಳನ್ನು ಚರ್ಚಿಸಿದ್ದೇನೆ. ಹೆಣ್ಣಿನ ಸಹಜ ಭಾವನಾತ್ಮಕ ನೆಲೆಯನ್ನು ಬಿಟ್ಟು ಚಿಂತನಾತ್ಮಕ ನೆಲೆಯಲ್ಲಿ ಈ ಅಭಿವ್ಯಕ್ತಿಗಳಿವೆ. ಇಲ್ಲಿನ ರೊಟ್ಟಿ, ಹಸಿವು, ಪ್ರಾಕೃತಿಕ ಮತ್ತು ಜೈವಿಕ ನೆಲೆಯ ಅನುಸಂಧಾನವನ್ನು ಮೂಲವಾಗಿ ಇಟ್ಟುಕೊಂಡು, ಅದರ ಆಧಾರಿತವಾಗಿ ನಾವು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ನೆಲೆಗೆ ಬಂದಾಗ ಪಡೆದುಕೊಳ್ಳುವ ಸ್ಥಿತ್ಯಂತರಗಳ ವಿವಿಧ ಮುಖಗಳನ್ನೆ ಪರಿಚಯಿಸುತ್ತದೆ. ಇಲ್ಲಿನ ರೊಟ್ಟಿ ಹಸಿವು ಸೃಷ್ಟಿಯ ಮೂಲಭೂತ ಜೀವ ರೂಪಗಳನ್ನು ಪ್ರತಿನಿಧಿಸುವ ಪಾತ್ರಗಳು. ಹಾಗೇ ಹಸಿವು ಎಂಬುದು ಹೊಟ್ಟೆಗೆ ಸಂಬಂಧಿಸಿದ್ದು ಮಾತ್ರವಲ್ಲ, ಸೃಷ್ಟಿಜನ್ಯ ಮೂಲ ಸ್ವಭಾವಕ್ಕೂ ವಿಸ್ತರಿಸುವಂತದ್ದು. ಅದರಾಚೆಗೂ ಪಸರಿಸಿರುವಂತದ್ದು. ಕವಿತೆಯೆಂದರ ಅರ್ಥವಲ್ಲ. ಅನುಭವ ಬಹುಶಃ ನಾನು ಕಂಡ ಬದುಕು – ನಾನು ಬಯಸುವ ಬದುಕಿನ ಅನುಸಂಧಾನದಲ್ಲಿ ಅನುಭವ, ಅನುಭಾವಗಳೆರಡನ್ನೂ ಒಳಗೊಂಡು ಇಲ್ಲಿ ಕವಿತೆಗಳು ಮೂಡಿವೆ".[೮]

ಒಟ್ಟಾರೆ ಹೇಳುವುದಾದರೆ, ಕಾವ್ಯಕ್ಕೆ ಅಲಂಕಾರಗಳು ಶೋಭೆಯನ್ನು ಹೆಚ್ಚಿಸಿದರೆ, ರೂಪಕ – ಪ್ರತಿಮೆಗಳು ಕಾವ್ಯ ಜಗತ್ತಿನ ಅನನ್ಯತೆಯನ್ನು, ಅರ್ಥವಲಯಗಳ ಅಸ್ಮಿತೆಯನ್ನು ಅತ್ಯಂತ

ಧ್ವನಿಪೂರ್ಣವಾಗಿ ನಿರೂಪಿಸುತ್ತವೆ. ಇಲ್ಲಿಯ ಒಂದು ಪದಕ್ಕೆ ವಿಭಿನ್ನ ಆಯಾಮಗಳನ್ನು ಸ್ಫುರಿಸುವ ಶಕ್ತಿ ಇರುತ್ತದೆ. ಯಾವುದನ್ನು ನೇರವಾಗಿ ಹೇಳದೇ, ವಿವಿಧ ವಸ್ತುಗಳಿಗೆ ನಿರ್ದಿಷ್ಟ ಗುಣಧರ್ಮವನ್ನು ಆರೋಪಿಸಿ, ಹೇಳುವ ಕ್ರಮಕ್ಕೆ 'ಪ್ರತಿಮಾ' ವಿಧಾನ ಎನ್ನಲಾಗುತ್ತದೆ. ಈ ನಿಟ್ಟಿನಲ್ಲಿ ೨೧ನೇ ಶತಮಾನದ ಕವಿಯತ್ರಿಯಾಗಿರುವ ರೂಪಾ ಅವರು ರೂಪಕ ಪ್ರತಿಮೆಗಳನ್ನು ನಿರ್ಮಿಸುವಲ್ಲಿ ಕಸರತ್ತು ಮಾಡಿರುವಂತೆ ತೋರುವುದಿಲ್ಲ. ಅದಕ್ಕೆ ಬದಲಾಗಿ ಕಣ್ಣೆದುರಿಗೆ ಕಾಣುವ, ಮನಸ್ಸಿಗೆ ನಾಟುವ, ಹೃದಯವನ್ನು ಮುಟ್ಟುವ, ಚರ್ಮವನ್ನು ಸ್ಪರ್ಶಿಸುವ, ನಾಸಿಕವನ್ನು ಆವರಿಸುವ ಧಾಟಿಯಲ್ಲಿ ದಿನಬಳಕೆಯ ವಸ್ತುಗಳನ್ನೇ ಬಳಸಿಕೊಂಡು, ಕವಿತೆಗಳನ್ನು ರೂಪಕವಾಗಿಸುತ್ತಾರೆ. ಪ್ರತಿಮೆಗಳನ್ನು ನಿರ್ಮಿಸುತ್ತಾರೆ. ಇವರು ಪ್ರತಿಮೆಗಳಿಗಾಗಿ ಪರಿಕರಗಳನ್ನು ಯಾವುದೋ ಅವ್ಯಕ್ತವಾದ, ಅಪರಿಚಿತವಾದ ಸಾಮಗ್ರಿಗಳನ್ನು ಶೋಧಿಸುವುದಿಲ್ಲ. ಕುದುರೆಗೆ ಬಿಗಿಯಲಾಗುವ ಕಣ್ಕಾಪು, ಸೂಜಿಗಳು, ಅಡುಗೆ ಮನೆಯ ಪದಾರ್ಥಗಳು, ಮಸಿ ಬಟ್ಟೆ, ರಸ್ತೆ, ಕಡಲು, ಬಾಗಿಲು, ಹೊಸ್ತಿಲು ಹೀಗೆ ತೀರಾ ಸಾಮಾನ್ಯವಾದ ವಸ್ತುಗಳಿಗೆ ಜೀವಕಳೆ ಬರುವಂತೆ ಪ್ರತಿಮೆಗಳನ್ನಾಗಿ ಕಡಿಯುವಲ್ಲಿ ಲೇಖಕರು ನಿಸ್ಸೀಮರು. ಕನ್ನಡ ವಿಮರ್ಶಾ ಜಗತ್ತು ಕೂಡ ರೂಪಾ ಅವರನ್ನು ಈ ಹಿನ್ನೆಲೆಯಲ್ಲಿ ಗುರುತಿಸುತ್ತದೆ. ಹೀಗಾಗಿ ಸಾಂಪ್ರದಾಯಿಕ ಪ್ರತಿಮಾ ಚೌಕಟ್ಟನ್ನು ಮೀರಿ, ಒಂದು ವಿಶಿಷ್ಟಪೂರ್ಣವಾದ ಮಾರ್ಗದಲ್ಲಿ ತುಂಬಾ ಫ್ರೆಶ್ಶಾಗಿ ರೂಪಕ ಪ್ರತಿಮೆಗಳನ್ನು ಬಳಸಿಕೊಂಡು ಕಾವ್ಯ ಕೃಷಿಯಲ್ಲಿ ತೊಡಿಗದ್ದಾರೆ. ಪ್ರತಿಮೆ ಬಳಸುವುದೆಂದರೆ ಲೇಖಕರಿಗೆ 'ನೀರು ಕುಡಿದಷ್ಟು' ಸುಲಭ. ಒಂದು ಸರಳವಾದ ಪ್ರತಿಮೆಯ ಮುಖೇನ ವಿಶಾಲ ಅರ್ಥ ಪ್ರಪಂಚವನ್ನೇ ಸಹೃದಯರ ಮುಂದೆ ತೆರೆದಿಡುತ್ತಾರೆ. ಇವರ ಕವಿತೆಗಳನ್ನು ಓದಿದಷ್ಟು ವಿಭಿನ್ನ ಅರ್ಥಸಾಧ್ಯತೆಗಳು ವಿಸ್ತಾರಗೊಳ್ಳುತ್ತಾ ಹೋಗುತ್ತವೆ. ಈ ರೀತಿಯ ಕಾವ್ಯ ನಿರ್ಮಿತಿ ಸೃಜನಶೀಲ ಪ್ರಜ್ಞೆಗೆ ಮಾತ್ರ ದಕ್ಕುವಂತಹದು. ಈ ಕಾರ್ಯದಲ್ಲಿ ರೂಪ ಹಾಸನ ಅವರ ಪ್ರತಿಮಾ ಕೋಶ ಸೃಜನಾತ್ಮಕವಾಗಿದೆ, ವಿಶಾಲವಾಗಿದೆ. ಕಾವ್ಯಕ್ಕೆ ಹೊಸ ಸ್ಪರ್ಶವನ್ನು, ಜೀವಸೆಲೆಯನ್ನು, ಭಾಷೆಯ ಸೊಗಡನ್ನು ಕವಿತೆಯ ಸಂವೇದನಾಶೀಲತೆಯನ್ನು ಇಲ್ಲಿನ ಪ್ರತಿಮೆಗಳು ಸಾಕ್ಷೀಕರಿಸುತ್ತವೆ. ಇವರ ಬಹುತೇಕ ಕವಿತೆಗಳು ವಾಚ್ಯಾರ್ಥವನ್ನು ಮೀರಿದ ಧ್ವನಿಪೂರ್ಣವಾದ ಶಿಲ್ಪಗಳಾಗಿವೆ.

**ಕೊನೆ ಟಿಪ್ಪಣಿಗಳು :**

೧. ಜಿ.ಎಸ್. ಶಿವರುದ್ರಪ್ಪರವರ ಸಮಗ್ರ ಗದ್ಯ ಸಂಪುಟ, ಭಾಗ – ೨, ಪುಟ. ೮೨, ಪ್ರಕಾಶನ.

೨. ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ, ಸಂ. ಡಾ. ಸಿ.ಬಿ. ಹೊನ್ನಯ್ಯ, ಪುಟ. ೨೦೮, ಜೈಭೀಮ್ ಪ್ರಕಾಶನ, ಬೆಂಗಳೂರು.

೩. ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ, ಸಂ. ಡಾ.ಸಿ.ಬಿ. ಹೊನ್ನಯ್ಯ, ಪುಟ. ೩೦೯, ಜೈಭೀಮ್ ಪ್ರಕಾಶನ, ಬೆಂಗಳೂರು.

೪. ಜನತಾ ಮಾಧ್ಯಮ, ವಿಮರ್ಶಾ ವಿಭಾಗ, ಡಿ.ಎಸ್. ರಾಮಸ್ವಾಮಿ, ಅರಸೀಕೆರೆ, ದಿನಾಂಕ ೧೫.೦೫.೨೦೦೫.

೫. ಕಡಲಿಗೆಷ್ಟೊಂದು ಬಾಗಿಲು, ರೂಪ ಹಾಸನ, ಪುಟ. ೩೦, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

೬. 'ಹೊಯ್ಸಳ ಸಿರಿ' ತ್ರೈಮಾಸಿಕ – ರಾಜ್ಯೋತ್ಸವ ವಿಶೇಷ, ಪುಟ. ೪೮, (ರೂಪ ಹಾಸನ ಅವರ ಕಾವ್ಯ ನಡೆದು ಬಂದ ದಾರಿ, ಡಾ. ಶಂಕರ, ಸಹಪ್ರಾಧ್ಯಾಪಕ, ಕನ್ನಡ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಸ್ನಾತಕೋತ್ತರ ಕೇಂದ್ರ, ಹಾಸನ) ದಿನಾಂಕ ೧.೧೧.೨೦೧೩.

೭. ರೂಪ ಹಾಸನ ಅವರು ಧಾರವಾಡದ ವರಕವಿ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್‌ನಲ್ಲಿ ೨೦೧೧ ಆಗಸ್ಟ್ ೧ ರಂದು 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕುರಿತು ಮಾಡಿದ ಉಪನ್ಯಾಸದಲ್ಲಿ ಬರುವ ಸಾಲುಗಳು.

೮. ರೂಪ ಹಾಸನ ಅವರು ಧಾರವಾಡದ ವರಕವಿ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್‌ನಲ್ಲಿ ೧.೦೮.೨೦೧೧ ರಂದು 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕುರಿತು ಮಾಡಿದ ಉಪನ್ಯಾಸದಲ್ಲಿ ಬರುವ ಸಾಲುಗಳು.

ಅಧ್ಯಾಯ ೫

## "ರೂಪ ಹಾಸನ ಅವರ ಕವಿತೆಗಳಲ್ಲಿ ವ್ಯಕ್ತವಾಗಿರುವ ಜೀವನ ಮೌಲ್ಯಗಳು ಮತ್ತು ಸಾಂಸ್ಕೃತಿಕ ಅನನ್ಯತೆ"

ಜೀವನ ಮತ್ತು ಸಂಸ್ಕೃತಿ ಒಂದೇ ನಾಣ್ಯದ ಎರಡು ಮುಖಗಳು. ಇವೆರಡರ ಉತ್ಪನ್ನವಾಗಿ ಸಾಹಿತ್ಯ ಹುಟ್ಟುತ್ತದೆ. ಯಾವುದೇ ಕಾಲದ ಕವಿಯಾದರೂ ತಾನು ಬದುಕುತ್ತಿರುವ ಕಾಲಘಟ್ಟದ ಜೀವನ ಮೌಲ್ಯಗಳನ್ನು, ಸಾಂಸ್ಕೃತಿಕ ಆಯಾಮಗಳನ್ನು ತನ್ನಲ್ಲಿ ಆಹ್ವಾನಿಸಿಕೊಂಡು ಅವುಗಳಿಗೆ ಸಾಹಿತ್ಯದ ಮುಖೇನ ಹೊಸ ಅರ್ಥ ಕೊಡುವ, ವ್ಯಾಖ್ಯಾನ ಬರೆಯುವ, ಕೊಳೆಯನ್ನು ತೊಳೆದು ಬೆಳೆಯನ್ನು ಬೆಳೆಯುವ ಕಾರ್ಯತತ್ಪರತೆಯನ್ನು ಸಾಂಸ್ಕೃತಿಕ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ಒಂದರ್ಥದಲ್ಲಿ ಕವಿಯಾದವನು ಸಾಹಿತ್ಯ ಕಟ್ಟುವುದು ಮಾತ್ರವಲ್ಲ ಅದನ್ನು ನಿರ್ಮಿಸುತ್ತಲೇ ಮಾನವ ಜನಾಂಗಕ್ಕೆ ಶ್ರೇಯಸ್ಸನ್ನು ಬಯಸುವ ಅವನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವುದಾಗಿರುತ್ತದೆ.

ರೂಪ ಅವರ ಕವಿತೆಗಳಲ್ಲಿ ದೇವರು, ಧರ್ಮ, ಆಚಾರ–ವಿಚಾರ, ಪ್ರಕೃತಿ, ವಿಸ್ಮಯ, ಜೀವನ ಮೌಲ್ಯಗಳು ಹೀಗೆ ಹತ್ತಾರು ವಿಷಯಗಳ ಕುರಿತು ಬರೆಯಲಾಗಿದೆ. ಜೀವನ ಮೌಲ್ಯ ಕಟ್ಟಿಕೊಡುವಲ್ಲಿ ಸಾಮಾಜಿಕ ಸಾಮರಸ್ಯದ ನೆಲೆಯಲ್ಲಿ ಒಂದು ನಿಚ್ಚಳವಾದ ಸಾಂಸ್ಕೃತಿಕ ಅನನ್ಯತೆಯನ್ನು ಇದರ ಅನೇಕ ಕವನಗಳು ಧ್ವನಿಪೂರ್ಣವಾಗಿ ಮೈದಳೆದಿವೆ. 'ಸರಸ ಜನನ, ವಿರಸ ಮರಣ, ಸಮರಸವೇ ಜೀವನ' ಎಂಬ ಬೇಂದ್ರೆ ಅವರ ಮಾತಿನಂತೆ ಕವಯಿತ್ರಿ ಅವರು ಸಂಘರ್ಷಕ್ಕೆ ಎಡೆಮಾಡಿಕೊಡದೆ ಜಾತಿ ವ್ಯವಸ್ಥೆ, ಕೋಮುವಾದ, ಜಾಗತೀಕರಣ ಇವುಗಳ ಭರಾಟೆಯಲ್ಲೂ ನಮ್ಮ ಪೂರ್ವಜರು ನಿರ್ಮಿಸಿಕೊಟ್ಟಿರುವ ಸಾಂಸ್ಕೃತಿಕ ಪರಂಪರೆಯ ತಳಹದಿಯ ಮೇಲೆ ಪ್ರಸ್ತುತ ಜಗತ್ತಿನ ವಿಲಕ್ಷಣಗಳನ್ನು ಮೆಟ್ಟಿ ನಿಲ್ಲಬೇಕೆಂದು ಹಂಬಲಿಸುತ್ತಾರೆ.



ಸೀತೆ ಸಾವಿತ್ರಿ ಅಹಲ್ಯೆ ಎಂದೂ
ಕೇಳದ ಪ್ರಶ್ನೆಗಳು
ದ್ರೌಪದಿ, ಗಾರ್ಗಿ, ಸಂಚಿ ಹೊನ್ನಮ್ಮ
ಕೇಳಿಯೂ ಉಳಿದ ಪ್ರಶ್ನೆಗಳು

ಎಂದು ಹೇಳುವಲ್ಲಿ ನಮ್ಮ ಸಾಂಸ್ಕೃತಿಕ ವಿಕಾಸಗತಿಯಲ್ಲಿ ಪುರುಷ–ಮಹಿಳೆಯ ಮೇಲೆ ಎಸಗಿರುವ ಪಾತಕಗಳನ್ನು ಬಿಚ್ಚಿಡುವುದು ಒಂದು ಉದ್ದೇಶವಾದರೆ, ಪ್ರಸ್ತುತ ಸ್ತ್ರೀ ಪ್ರಶ್ನಿಸದೇ ಮೂಲೆ ಗುಂಪಾಗಬಾರದು. ಎಲ್ಲವನ್ನು ಪ್ರಶ್ನಿಸುವ, ವಿಶ್ಲೇಷಣೆ ಮಾಡುವ ಮನೋಸ್ಥೈರ್ಯ ತುಂಬಿಕೊಂಡು

ಗೊಡ್ಡು ಜೀವನ ಮೌಲ್ಯಗಳನ್ನು, ಸಾಂಸ್ಕೃತಿಕ ಅನಾಚಾರಗಳನ್ನು ಸೀಳುತ್ತಲೇ ಅದೇ ಸಂದರ್ಭದಲ್ಲಿ ಸ್ತ್ರೀ ತನ್ನತನವನ್ನು ಕಟ್ಟಿಕೊಡುವಂತಹ ಮೌಲ್ಯಗಳನ್ನು ಅವಳ ಆತ್ಮಗೌರವಕ್ಕೆ ಬೆಲೆಕೊಡುವ ಸಾಂಸ್ಕೃತಿಕ ಅನನ್ಯತೆಯನ್ನು ನಿರ್ಮಿಸಿಕೊಳ್ಳುವ ರೀತಿಯಲ್ಲಿ ಇಲ್ಲಿಯ ಅನೇಕ ಕವನಗಳು ಕತ್ತಲೆ ಓಡಿಸಿ ಬೆಳಕು ತುಂಬುವ ಕೆಲಸ ಮಾಡುತ್ತವೆ.

"ಯಾರ ಸೃಷ್ಟಿ ಈ
ಮಡಕೆ ಒಡೆವ ಆಟ
ಕಣ್‌ಕಟ್ಟಿ ದಾರಿ ತಡಕುತ್ತ
ಗುರಿಗಾಗಿ ಹುಡುಕಾಟ
ತಪ್ಪುತ್ತಲೇ ಇರುವ ಹಾದಿಯಲಿ
ನಿರಂತರ ಅಲೆದಾಟ"[೨] (ಮಡಕೆ ಒಡೆವ ಆಟ)

ಇಲ್ಲಿ ಬಂದಿರುವ ಸಾಲುಗಳು ಈಗಾಗಲೇ ಪೂರ್ವಗ್ರಹಪೀಡಿತವಾಗಿ ನಿರ್ಮಿಸಿಕೊಂಡಿರುವ ಪೊಳ್ಳು ಆಚರಣೆಗಳನ್ನು, ಕಂದಾಚಾರಗಳನ್ನು ಕಣ್ಣಿಗೆ ಬಟ್ಟೆಕಟ್ಟಿ ದಾರಿ ತಪ್ಪಿಸುವ ಧಾರ್ಮಿಕ ಹುನ್ನಾರಗಳನ್ನು, ದೇವರು ಧರ್ಮದ ಹೆಸರಿನಲ್ಲಿ ಎಣೆಯಲಾಗಿರುವ ಷಡ್ಯಂತ್ರಗಳನ್ನು ಸಾರಸಗಟಾಗಿ ಒಡೆದು ಹಾಕುತ್ತವೆ. ಹೀಗೆ ಮಾಡುತ್ತಲೇ ನಮ್ಮ ಸಂಸ್ಕೃತಿಯೊಳಗೆ ಅಡಕವಾಗಿರುವ ಪೊಳ್ಳುತನವನ್ನು, ಆಷಾಢಭೂತಿತನವನ್ನು ಧಿಕ್ಕರಿಸಿ ಹೊಸಕಾಲದ ಅನಿವಾರ್ಯಗಳಿಗೆ ಒಗ್ಗುವಂತಹ, ಸರ್ವರನ್ನು ಸಮಾನವಾಗಿ ಉಪಚರಿಸುವಂತಹ ಜೀವನ ಮೌಲ್ಯಗಳನ್ನು ಹಾಗೂ ಸಾಂಸ್ಕೃತಿಕ ಜಗತ್ತನ್ನು ಕಟ್ಟಬೇಕೆನ್ನುವುದು ರೂಪ ಅವರ ಮನದಾಳದ ಅಭೀಪ್ಸೆಯಾಗಿದೆ.

ಸಂಸ್ಕೃತಿ ಚೌಕಟ್ಟಿನಲ್ಲಿ ದೇವರು, ಧರ್ಮ, ಭಯ, ಭಕ್ತಿ, ನಂಬಿಕೆ, ಸಂಪ್ರದಾಯ, ಆಚರಣೆ, ವಿಧಿ ವಿಧಾನಗಳು, ಉಡುಗೆ–ತೊಡುಗೆಗಳು, ಆಹಾರ ಪದ್ಧತಿಗಳು ಇತ್ಯಾದಿ ಸಾಂಪ್ರದಾಯಿಕ ಹಾಗೂ ಸಾಮಾಜಿಕ ಸಂಗತಿಗಳು ಸಾಮಾನ್ಯವಾಗಿ ಕಂಡು ಬರುತ್ತವೆ. ಆದರೆ ರೂಪ ಹಾಸನ ಅವರು ಸಾಂಸ್ಕೃತಿಕ ವಿಚಾರಧಾರೆಗಳನ್ನು ಬಹುತ್ವದ ನೆಲೆಯಲ್ಲಿ ನೋಡಲು ಯತ್ನಿಸಿದ್ದಾರೆ. ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಮಹಿಳೆಯನ್ನು ನೋಡುತ್ತಿರುವ ರೀತಿಯನ್ನು ಕುರಿತಂತೆ ಶೋಧಿಸಲು ಪ್ರಯತ್ನಿಸಿದ್ದಾರೆ. ಇಲ್ಲಿಯ ಅನೇಕ ಕವಿತೆಗಳು ದೇವರು ಮತ್ತು ಧರ್ಮದ ಹೆಸರಿನಲ್ಲಿ ಸಾಮಾಜಿಕ ಕಟ್ಟುಪಾಡುಗಳ ನೆಪದಲ್ಲಿ ಸ್ತ್ರೀ ಲೋಕದ ಅನನ್ಯತೆಯನ್ನು, ಆಕೆಯ ಬದುಕಿನ ಅಸ್ಮಿತೆಯನ್ನು ಹತ್ತಿಕ್ಕಲು ಮೂಡುತ್ತಿರುವ ಅನಾಚಾರಗಳನ್ನು ಕುರಿತಂತೆ, ಬೆಳಕು ಚೆಲ್ಲುತ್ತವೆ. 'ಒಂದಿಷ್ಟು ಹಸಿಮಣ್ಣು' ಕವಿತೆಯಲ್ಲಿ ಬರುವಂತೆ,

"ಒಂದಿಷ್ಟು,
ಒಂದಿಷ್ಟೇ ಇಷ್ಟು
ಹಸಿಮಣ್ಣು ನೀಡು ಗೆಳೆಯ

ನನ್ನದೇ ಕಲ್ಪನೆ ಬೆರೆಸಿ
ಸುಂದರ ಮನೆಯಾಗುತ್ತಾನೆ
ಚಿತ್ರವಿಚಿತ್ರ ಕಲಾಕೃತಿಯಾಗುತ್ತೇನೆ
ಮಡಿಕೆ, ಕುಡಿಕೆ, ಕುಂಡವಾಗುತ್ತೇನೆ
ಎಲ್ಲಾ ಒಂದಿಷ್ಟೇ ಇಷ್ಟು ಹಸಿಮಣ್ಣಿನಿಂದ!"[1] (ಒಂದಿಷ್ಟು ಹಸಿಮಣ್ಣು)

ಎಂದು ಹೇಳುವಲ್ಲಿ ಒಂದು ಸುಂದರವಾದ, ಅಪ್ಯಾಯಮಾನವಾದ, ಎಲ್ಲರನ್ನು ಒಳಗೊಳ್ಳುವಂತಹ ಸಾಂಸ್ಕೃತಿಕ ಜಗತ್ತನ್ನು ನಿರ್ಮಿಸಬೇಕೆಂಬ, ಆ ಮುಖೇನ ಸ್ತ್ರೀ ಪುರುಷರು ಬೆರೆತು, ತಾರತಮ್ಯಗಳನ್ನು ಬದಿಗೊತ್ತಿ, ಸಂಸ್ಕೃತಿ ಸಮುಚ್ಚಯಕ್ಕೆ ಹೊಸ ಭಾಷ್ಯವನ್ನು ಬರೆಯಬೇಕಾಗಿದೆ ಎಂಬ ಧ್ವನಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಬರುವ 'ಸುಂದರ ಮನೆಯಾಗುತ್ತೇನೆ, ಚಿತ್ರ ವಿಚಿತ್ರ ಕಲಾಕೃತಿಯಾಗುತ್ತೇನೆ' ಎಂಬ ಪದಪುಂಜಗಳು ಸಂಸ್ಕೃತಿಯನ್ನು ಪುನರ್ ಮೌಲ್ಯೀಕರಣಕ್ಕೆ ಒಳಪಡಿಸಿ ಹೊಸ ರೀತಿಯಲ್ಲಿ ಅರ್ಥೈಸಬೇಕೆಂಬ ತುಡಿತವಿದೆ.

ರೂಪ ಅವರ ಕವಿತೆಗಳಲ್ಲಿ ಸಂಸ್ಕೃತಿ ಸಮುಚ್ಚಯದ ದೋಷಗಳನ್ನು ತೋರಿಸುವುದು ಮಾತ್ರವಲ್ಲದೆ, ಅದೇ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯಲ್ಲಿ ಮಿಳಿತಗೊಂಡಿರುವ ಭವ್ಯತೆಯನ್ನು ಉಳಿಸಿಕೊಳ್ಳಬೇಕೆಂಬ ಹಂಬಲವಿದೆ. ಲೌಖಿಕ – ಅಲೌಖಿಕ, ಮೂರ್ತ – ಅಮೂರ್ತ, ಅನುಭವ – ಅನುಭಾವ ಹಾಗೂ ಆಧ್ಯಾತ್ಮಿಕ ಮೌಲ್ಯಗಳು, ಚಿಂತನೆಗಳು, ವಿವಿಧ ಕವಿತೆಗಳಲ್ಲಿ ಅವ್ಯಕ್ತವಾಗಿ ಬಂದು ಲೇಖಕರ ಅನುಭಾವ ದೃಷ್ಟಿಯನ್ನು ಅನಾವರಣಗೊಳಿಸುತ್ತವೆ. 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕೃತಿಯ ಹಲವಾರು ಪದ್ಯಗಳು 'ರೂಪ ಹಾಸನ ಅವರ ಕಾವ್ಯ ಅನುಭದಿಂದ, ಅನುಭಾವದ ಕಡೆಗೆ ಸಾಗುತ್ತಿರುವ ಪರಿಯನ್ನು ಬಿಚ್ಚಿಡುತ್ತದೆ. ಈ ಕೃತಿಯಲ್ಲಿ ಹಸಿವು ಮತ್ತು ರೊಟ್ಟಿಯನ್ನು ಪ್ರತೀಕವಾಗಿಸಿಕೊಂಡು, ಅವುಗಳ ಸುತ್ತ ಹೆಣೆಯಲ್ಪಟ್ಟಿರುವ ಜೀವನದ ಅನಿವಾರ್ಯತೆಗಳನ್ನು, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಅನೇಕ ಪದ್ಯಗಳು ತಲಸ್ಪರ್ಶಿಯಾಗಿ, ಧ್ವನಿಪೂರ್ಣವಾಗಿ ವಿವರಿಸುತ್ತವೆ. ಇವರ ಕವಿತೆಗಳಲ್ಲಿ ಸಂಸ್ಕೃತಿಯ ಆಳವಾದ ಅನುಭವದ ಜೊತೆಗೆ ಸುಶಿಕ್ಷಿತ ಮನಸ್ಸಿನ ಪ್ರಗತಿಪರ ವಿಚಾರಗಳೂ ಸೇರಿಕೊಂಡು ಪರಿಸರ, ಶಿಕ್ಷಣ, ಧರ್ಮ, ಆಚರಣೆ, ಸಾಮಾಜಿಕ ಅನಿಷ್ಟಗಳಾದ ವರದಕ್ಷಿಣೆ, ಹೆಣ್ಣುಮಕ್ಕಳ ಶೋಷಣೆ, ಮನುಷ್ಯ ಸಂಬಂಧಗಳು, ಸಮಾಜದ ಕಟ್ಟುಪಾಡುಗಳು, ಸಂಪ್ರದಾಯ ನಂಬಿಕೆಗಳು ಬದಲಾವಣೆಯನ್ನು ವಿಕಾಸವನ್ನು ಬಯಸುವ ವ್ಯಕ್ತಿಗಳೊಂದಿಗೆ ಮುಖಾಮುಖಿಯಾಗಿಸುವ ಸಂಘರ್ಷ ಅನಿವಾರ್ಯವಾಗುತ್ತದೆ. ಇವತ್ತಿನ ಮಹಿಳಾ ಕಾವ್ಯ ಮಧ್ಯಮ ವರ್ಗದ ಎಚ್ಚೆತ್ತ, ಸುಶಿಕ್ಷಿತ ವರ್ಗದ ಮಹಿಳೆಯರ ನಿರ್ಭೀಡತೆಯ ಅಭಿವ್ಯಕ್ತವಾಗಿದೆ. ಪುರುಷ ಪ್ರಧಾನ ಸಮಾಜ ಸಂಸ್ಕೃತಿಯನ್ನು ಬದಲಿಸಿ ಅವರಲ್ಲಿ ಪ್ರೀತಿಯನ್ನು ಗಳಿಸುವ, ಅವರನ್ನು ಪ್ರತಿಭಟಿಸಿ, ಹೋರಾಟ ಮಾಡದೆ, ಅವರ ಆಂತರ್ಯವನ್ನು ಪರಿವರ್ತಿಸುವ ಕೆಲಸಗಳು ಇವರ ಕವಿತೆಗಳ ಮುಖೇನ ನಡೆಯುತ್ತಿವೆ.

ಸಮಾಜ ರೂಪಿಸುವ ಕಟ್ಟುಕಟ್ಟಳೆ, ಸಂಪ್ರದಾಯ, ಪರಂಪರೆಯನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ವಿಸ್ತೃತ ಸಮಾಜವಿರುವಾಗ, ಅದನ್ನು ಮೀರುವ, ಬದಲಾಯಿಸುವ ಸಣ್ಣ ಪ್ರಯತ್ನಗಳೂ ಅಪರಾಧಗಳೆನಿಸಿ ದೊಡ್ಡ

ಗದ್ದಲವನ್ನು ಎಬ್ಬಿಸಿವೆ. ಸಮಾಜ ಸಂಸ್ಕೃತಿ ಸಂಬಂಧವಾಗಿ ಬರೆಯುವಾಗ ಸಮಾಜವೊಂದು ಸೃಷ್ಟಿಯಾಗುತ್ತಿರುವುದನ್ನು ವಿವರಿಸುತ್ತಾರೆ. "ದೇವರು, ಧರ್ಮಗಳು ಹುಟ್ಟು ಹಾಕಿದ ನಂಬಿಕೆ, ಸಂಪ್ರದಾಯಗಳು, ಮೌಢ್ಯದ ರೂಪ ತಳೆದು ಮುಂದುವರೆಯುತ್ತಿರುವುದು ಅಪಾಯವೆನ್ನುತ್ತಾರೆ" ಕ್ಷಣಿಕ ಸುಖವನ್ನು ಈ ಮೂಢನಂಬಿಕೆ, ಸಂಪ್ರದಾಯಗಳು, ನೀಡುವುದು ನಿಜವಾದರೂ ಧಾರ್ಮಿಕ ಅಂಧ ಶ್ರದ್ಧೆ ಮನುಷ್ಯನಲ್ಲಿ ಅಸಹನೆಯನ್ನು ಹುಟ್ಟು ಹಾಕಿ ಮತೀಯ ಗಲಭೆಗಳಿಗೆ ದಾರಿ ಮಾಡಿ ಸಂಸ್ಕೃತಿಯ ವಿನಾಶಕ್ಕೆ ಕಾರಣವಾಗುತ್ತದೆ.

ರೂಪ ಹಾಸನ ಅವರು ದೇವರು ಮತ್ತು ಧರ್ಮದ ನಂಬಿಕೆಗಳು ಶಾಶ್ವತವಿಲ್ಲ. ಅಲ್ಲಿಯೂ ನೈಜ, ವಾಸ್ತವ, ಬದುಕು ಬೇಕೇ ಬೇಕು. 'ಅರಿತವೇನು, ಅಂತರಾಳವ' ಎಂಬ ಅಂಶವನ್ನು ಗಮನಿಸಿದಾಗ ತನ್ನನ್ನು, ತಮ್ಮನ್ನು ತಾವು ಅರಿತಾಗ ಮಾತ್ರ ತಮ್ಮತನವು ಉದ್ದೀಪನಗೊಳ್ಳುತ್ತದೆ. ದೇವರು, ಧರ್ಮ, ನಂಬಿಕೆಗಳು, ಸಾರ್ವತ್ರಿಕವಾಗಿದ್ದರೆ ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕ ಅಂಶಗಳು ಬಹಳ ಮುಖ್ಯವಾಗುತ್ತವೆ. ಸಾಮಾಜಿಕ ಅಂಶಗಳಲ್ಲಿ ಮಾನವೀಯ ಅಂಶಗಳು ಪ್ರಬಲವಾಗಿದೆ. ಯಾವುದೇ ಧರ್ಮದ ಪ್ರಾರ್ಥನೆ, ಧ್ಯಾನ್ಯಗಳು ವ್ಯಕ್ತಿ ಏಕಾಗ್ರತೆಯನ್ನು ಶಾಂತಿಯನ್ನು ಪಡೆದು ತನ್ಮೂಲಕ ಆತ್ಮೋನ್ನತಿಯನ್ನು ಹೊಂದುವ ಉದ್ದೇಶವನ್ನು ಹೊಂದಿರುತ್ತದೆ. ಇಂತಹ ಪವಿತ್ರ ಪ್ರಾರ್ಥನಾ ಮಂದಿರಗಳ ನಿರ್ಮಾಣವೇ ಅಶಾಂತಿಯ ರಕ್ತಪಾತದ ತಳಹದಿಯನ್ನು ಹೊಂದಿರುವುದಾದರೆ ಅಂತಹ ಮಂದಿರದ ನಿರ್ಮಾಣದಿಂದ ಕೋಮುದ್ವೇಷವನ್ನು ಮತ್ತಷ್ಟು ಹೆಚ್ಚಿಸುವ ಉದ್ದೇಶವನ್ನು ಹೊರತುಪಡಿಸಿ ಮತ್ತೇನನ್ನು ಸಾಧಿಸಿದಂತಾಗುತ್ತದೆ? ಪೋಲಿಸರ ಕಾವಲಿರುವ ಯಾವುದೇ ಪ್ರಾರ್ಥನಾ ಮಂದಿರಕ್ಕೆ ಹೋಗಿ ವ್ಯಕ್ತಿ ಪ್ರಾರ್ಥನೆ ಸಲ್ಲಿಸುವಂತಾದರೆ ಅವನ ಮನ ಏಕಾಗ್ರತೆಯನ್ನು, ಶಾಂತಿಯನ್ನು ಹೊಂದಲು ಸಾಧ್ಯವೇ ಎನ್ನುತ್ತಾರೆ.

ದೇವರು ಧರ್ಮ ನಂಬಿಕೆಗಳ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಧರ್ಮ, ನಂಬಿಕೆ, ದೇವರು ಎಂಬ ಹೆಸರುಗಳನ್ನು ಹೇಳಿಕೊಂಡು ಸಮಾಜದಲ್ಲಿ ವಿಷಬೀಜವನ್ನು ಬಿತ್ತಿ ಯುವಕರನ್ನು, ಜನತೆಯನ್ನು ದಿಕ್ಕು ತಪ್ಪಿಸುವ ಧರ್ಮಾಂಧತೆಯಲ್ಲಿ ಸಾಮಾಜಿಕಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಮನುಷ್ಯನನ್ನು ಕಟ್ಟಿಹಾಕುವ ಹೀನ ಪ್ರವೃತ್ತಿ ಇಂತಹ ನೆಲೆಗಳಲ್ಲಿ ತಲೆದೋರುವುದನ್ನು ಕಾಣುತ್ತ ಹೋಗುತ್ತೇವೆ. ದೇವರು ಧರ್ಮ ಸಂಪ್ರದಾಯಗಳ ಹೆಸರಿನಲ್ಲಿ ವ್ಯಾಪಾರ ಮನೋಧರ್ಮವನ್ನು ಉಂಟು ಮಾಡುವ ಹಾಗೂ ಮೋಸ ವಂಚನೆಗಳನ್ನು ಉಂಟು ಮಾಡುವ ಅಂಶಗಳು ದಿನನಿತ್ಯ ಎದ್ದು ಕಾಣುತ್ತದೆ.

"ಗಂಟೆ ಗಟ್ಟಲೆ ಕೂತು ಸಹನೆಯಲಿ ಅಪ್ಪ
ಒಲೆಯುರಿಸುವ ಸಾಹಸದ ಪರಿ
ನೋಡಿ ಮಗನಿಗೋ ಕಿರಿಕಿರಿ
ಸೋಲಾರು, ಗೀಸರು, ಬಾಯ್ಲರು
ಎಲ್ಲ ಅನುಕೂಲವಿದ್ದರೂ ಈ ಇಳಿವಯಸ್ಸಿನಲಿ
ಹೊಗೆ ಮಸಿಗಳ ಜೊತೆಗೆ ಗುದ್ದಾಡಿ

ಅಲ್ಲಲ್ಲಿನ ಕಸಗಳನ್ನೆಲ್ಲಾ ಒಟ್ಟು ಮಾಡಿ
ಮೈ – ಕೈ ಸಿಗ್ಗಿಸಿ ಜುಂಗಾಡಿ
ಗಂಟೆಗಟ್ಟಲೆ ಬಿಸಿ ಕಾವಿನ ಮುಂದೆ ಕೂತು – ಯಾಕಿಂಥಾ ನರಕ?[3]

(ಅಪ್ಪನೂ ಒಲೆಯುರಿಯೂ)

ರೂಪ ಹಾಸನ ಅವರ 'ಅಪ್ಪನೂ ಒಲೆಯುರಿಯೂ' ಎಂಬ ಕವಿತೆಯಲ್ಲಿ ಸಂಸ್ಕೃತಿಯೊಳಗೆ ಆಧುನಿಕತೆ ಮತ್ತು ಸಂಪ್ರದಾಯಗಳ ಮುಖಾಮುಖಿಯನ್ನು ನೋಡಬಹುದಾಗಿದೆ. ಮಗನಿಗೆ ಹಳೆಯದರ ಬಗ್ಗೆ ಅಸಹನೆಯಿದೆ. ತಂದೆಗೆ ಹೊಸದರ ಬಗ್ಗೆ ಅಸಹನೆ ಇದೆ. ಇವೆರಡೂ ವೈರುಧ್ಯಗಳ ನಡುವೆಯೂ ಒಲೆಯುರಿ ಎನ್ನುವಂತಹ ಶ್ರಮದ ಕಾಯಕವೇ ತುಂಬಾ ಅದ್ಭುತವಾಗಿ ಕಂಡುಬರುವುದಾಗಿ ಕಾಣುತ್ತೇವೆ. ಇಲ್ಲಿ ಸಂಪ್ರದಾಯವಿದೆ. ಸಂಸ್ಕೃತಿ ಇದೆ. ಹೊಸದು ಹಳೆಯದರ ಮುಖಾಮುಖಿ ತಿಕ್ಕಾಟವಿದೆ. ಯಾವುದನ್ನು ಒಪ್ಪಿಕೊಳ್ಳಬೇಕು, ಯಾವುದನ್ನು ಒಪ್ಪಿಕೊಳ್ಳಬಾರದು ಎಂಬ ಸಾಂಸ್ಕೃತಿಕ ಸಂಘರ್ಷ ಪ್ರಕಟಗೊಳ್ಳುತ್ತದೆ.

'ಕಡಲಿಗೆಷ್ಟೊಂದು ಬಾಗಿಲು' ಕೃತಿಯಲ್ಲಿ ಬರುವ 'ಪರ್ಯಾಯ' ಕವಿತೆಯು ನಿಚ್ಚಳವಾದ ಸಾಂಸ್ಕೃತಿಕ ಅನನ್ಯತೆಯನ್ನು ಜೀವನ ಮೌಲ್ಯಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಧ್ವನಿಸುತ್ತದೆ. ಅಡುಗೆಗೆ ಬಳಸುವ ಧಾನ್ಯಗಳನ್ನೆ ರೂಪಕವಾಗಿಸಿಕೊಂಡು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸುವ ಮಹತ್ವಾಕಾಂಕ್ಷೆಯನ್ನು ಇಲ್ಲಿಯ ಸಾಲುಗಳು ಪ್ರಕಟಗೊಳಿಸುತ್ತವೆ. ಧಾನ್ಯಗಳು ಬೇರೆ ಬೇರೆಯಾದರೂ, ಎಲ್ಲವೂ ಬೆರೆತು ಒಂದು ರುಚಿಕಟ್ಟಾದ ಅಡುಗೆಗೆ ಕಾರಣೀಭೂತವಾಗುವಂತೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ನೂರಾರು ವೈರುಧ್ಯಗಳು ಇದ್ದರೂ ಅವುಗಳ ನಡುವೆಯೇ ಸಾಮರಸ್ಯದ ಬದುಕನ್ನು ಕಟ್ಟಿಕೊಳ್ಳಬಹುದೆಂಬ ಆಕಾಂಕ್ಷೆಯನ್ನು ಲೇಖಕರು ವ್ಯಕ್ತಪಡಿಸುತ್ತಾರೆ.

"ಸಾಸಿವೆ ಜೀರಿಗೆ ಅರಿಶಿಣ ಧನಿಯ
ಕಡಲೆ ಉದ್ದಿನಬೇಳೆ – ಇತ್ಯಾದಿತ್ಯಾದಿ
ಒಗ್ಗರಣೆ ದಿನಸಿ ಪುಟ್ಟ ಪುಟ್ಟ ಬಟ್ಟಲಲಿ
ತುಂಬಿಕೊಂಡೇ ಮೈತಳೆವ ಅದ್ಭುತ
ವಿವಿಧತೆಯಲ್ಲಿ ಏಕತೆಯ ಸಂಕೇತ
ಅರಿವಿನಾ ಹಾದಿ ಈ ಒಗ್ಗರಣೆ ಡಬ್ಬಿ
ಖಾಲಿಯಾದಂತೆಲ್ಲಾ ತುಂಬಿಡುವ ಹಬ್ಬ"[4] (ಪರ್ಯಾಯ)

ಈ ಪರಿಕರಗಳನ್ನು ಸಾಹಿತ್ಯವಾಗಿಸುವ ಕವಿತೆಗೆ ಒಳಪಡಿಸುವ ಪ್ರತಿಮಾತ್ಮಕ ಅಭಿವ್ಯಕ್ತಿಯನ್ನು ಸೃಷ್ಟಿಕ್ರಿಯೆಯ ಅನನ್ಯತೆಯನ್ನು ಉಂಟು ಮಾಡಿದ್ದಾರೆ. ಸಾಸಿವೆ, ಜೀರಿಗೆ, ಅರಿಶಿನ, ಧನಿಯಾ, ಕಡಲೆ, ಉದ್ದಿನಬೇಳೆ, ಇವುಗಳಲ್ಲಿ ವಿವಿಧತೆಯಲ್ಲಿ ಏಕತೆಯನ್ನು ಮೂಡಿಸುವ ಕೆಲಸವನ್ನು ಮಾಡಿದ್ದಾರೆ.

"ರಾಜ ರಾಣಿ ಕುದುರೆ ಒಂಟೆ ಆನೆ ಪದಾತಿ
ಹಿಂಡುಕಟ್ಟಿ ಸದಾ ಯುದ್ಧ ಯುದ್ಧ ಯುದ್ಧ
ಅವರನಿವರು ಕೊಂದು
ಇವರನವರು ತರಿದು
ಗೆದ್ದವರ ತಿಮಿರಿನುನ್ಮಾದ
ಅದು ನಮಗೆ ನಿಷೇಧ"                    (ನಾವು ಅಂತವರಲ್ಲ)

ಕವಿತೆಯ ಈ ಸಾಲುಗಳು ಮಾನವ ರೂಢಿಸಿಕೊಂಡಿರುವ ವಿಕೃತವಾದ ಯುದ್ಧ ಸಂಸ್ಕೃತಿಯನ್ನು ಕುರಿತು ವಿವರಿಸುತ್ತವೆ. ಆದರೆ, ಯುದ್ಧಗಳಿಂದ ಮನುಕುಲಕ್ಕೆ ಯಾವುದೇ ಪ್ರಯೋಜನವಿಲ್ಲ ಎಂಬ ಸಂದೇಶವು ಇಲ್ಲಿ ಮುಖ್ಯವಾಗುತ್ತದೆ. ರಾಜ ಮಹಾರಾಜರು ತಮ್ಮ ಪ್ರತಿಷ್ಠೆಗಾಗಿ ಯುದ್ಧಗಳನ್ನು ಕೈಗೊಂಡು ಯುದ್ಧ ಮಾಡುವುದೇ ಒಂದು ಸಂಸ್ಕೃತಿ ಎಂದು ಭ್ರಮಿಸಲಾಗಿತ್ತು. ಗೆದ್ದವರು ಉನ್ಮಾದದ ತುತ್ತ ತುದಿಯನ್ನು ಏರಿ ಸಾರ್ವತ್ರಿಕವಾದ ಹಿತಾಸಕ್ತಿಯನ್ನು ಮರೆತು ಚದುರಂಗದ ಹಿಂದೆ ಬಿದ್ದು ಅಸಂಖ್ಯಾತ ಜನರ ಸಾವಿಗೆ ಕಾರಣವಾಗುವ ಯುದ್ಧ ಸಂಸ್ಕೃತಿಯನ್ನು ಅತ್ಯಂತ ದಿಟ್ಟವಾಗಿ ವಿರೋಧಿಸಲಾಗಿದೆ. ಇಲ್ಲಿ ಲೇಖಕರಿಗೆ ಚರಿತ್ರೆಗೆ ದಾಖಲಾಗುವ ಯಾವುದೇ ತುಡಿತವಿಲ್ಲ. ಇತಿಹಾಸದಲ್ಲಿ ದಾಖಲಾಗದೆಯೇ ಸದಾ ವರ್ತಮಾನದಲ್ಲಿದ್ದು ಜೀವಂತಿಕೆಯನ್ನು ಉಳಿಸಿಕೊಳ್ಳುವ ಮನುಷ್ಯ ಪರವಾದ ಸಂಸ್ಕೃತಿಯನ್ನು ಕಟ್ಟಿಕೊಡುವ ಹಂಬಲವಿದೆ.

"ತಡೆಯದೇ ಬಾಗಿಲು ಮುರಿದು
ಗರ್ಭಗುಡಿಗೆ ನುಗ್ಗಿತ್ತು ಕುರಿಹಿಂಡು
ಒಳಗೆ ಕಾಲಿಟ್ಟ ಘಳಿಗೆ
ಆವೇಶ ಉನ್ಮಾದ ಎಲ್ಲ ನಿಶ್ಯಬ್ಧ
ತಟ್ಟಲು ಕಾದಿದ್ದ ಚಪ್ಪಾಳೆ
ಗಹಗಹಿಸಬೇಕಿದ್ದ ವಿಕೃತ ನಗೆ
ಚುಚ್ಚಬೇಕೆಂದಿದ್ದ ಮಾತಿನ ಹಗೆ
ಅವರವರಲ್ಲೆ ಸ್ತಬ್ಧ

ಒಳಗೆ ಜೀವವೂ ಇಲ್ಲ! ದೇವನೂ ಇಲ್ಲ!
ಕಾಯ ಶಾಶ್ವತವಲ್ಲ ಮೂರ್ತಕ್ಕೆ ಚಲನೆಯಿಲ್ಲ
ಆತ್ಮಕ್ಕೆ ಸಾವಿಲ್ಲ ಅಮೂರ್ತಕ್ಕೆಣೆಯಿಲ್ಲ
ಸತ್ಯದೆದುರಿಗೆ ಮಿಥ್ಯಕ್ಕೆ ಜಯವಿಲ್ಲ"                    (ತರ್ಕ ಮೀರುವ ಹೊತ್ತು)

ಈ ಕವಿತೆಯು ಲೇಖಕರ ಸಾಂಸ್ಕೃತಿಕವಾದ ವೈಚಾರಿಕ ಪ್ರಜ್ಞೆಯನ್ನು ನಿರೂಪಿಸುತ್ತದೆ. ಉಪನಿಷತ್ತಿನ ವಾಕ್ಯವಾದ 'ಈಶವಾಸ್ಯನಿದಂ ಶರೀರಂ' ಎಂಬ ವಾಕ್ಯವನ್ನು ನೆನಪಿಗೆ ತರುತ್ತದೆ. ಬಸವಣ್ಣನವರ 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ವಚನದ ಸಾಲುಗಳು ಕೂಡ ಕವಿತೆಯ ಮೇಲೆ ಪ್ರಭಾವ

ಬೀರಿರುವುದನ್ನು ಗುರುತಿಸಬಹುದಾಗಿದೆ. ಒಂದಲ್ಲ ಒಂದು ದಿನ ಗರ್ಭಗುಡಿ ಸಂಸ್ಕೃತಿಯ ಆಧಾರಸ್ತಂಭ ಕಳಚಿ ಬಿದ್ದು; ದೇವರು ಆಲಯ ಬಿಟ್ಟು ಬಯಲಾಗುತ್ತಾನೆ ಎಂಬ ಭಾವ ಇಲ್ಲಿ ಅಭಿವ್ಯಕ್ತಗೊಂಡಿದೆ. 'ಒಳಗೆ ಜೀವವೂ ಇಲ್ಲ! ದೇವನೂ ಇಲ್ಲ! ಕಾಯ ಶಾಶ್ವತವಲ್ಲ ಮೂರ್ತಕ್ಕೆ ಚಲನೆಯಿಲ್ಲ, ಆತ್ಮಕ್ಕೆ ಸಾವಿಲ್ಲ ಅಮೂರ್ತಕ್ಕೆಣೆಯಿಲ್ಲ, ಸತ್ಯದೆದುರಿಗೆ ಮಿಥ್ಯಕ್ಕೆ ಜಯವಿಲ್ಲ'

ಸೂತ್ರ ಪ್ರಾಯದ ಸಾಲುಗಳು "ಆಲಯ ಸಂಸ್ಕೃತಿ'ಗಿಂತ 'ಬಯಲು ಸಂಸ್ಕೃತಿ'ಯೇ ಸರ್ವಸಾಮಾನ್ಯವಾದದ್ದು ಎಂಬ ಭಾವವನ್ನು ಎತ್ತಿ ಹಿಡಿಯುತ್ತವೆ. ಅಲ್ಲದೆ, ರೂಪ ಹಾಸನ ಅವರು ಅನುಭವದಿಂದ ಅನುಭಾವದ ನೆಲೆಗೆ ಚಲಿಸುತ್ತಿರುವ ಪರಿಯನ್ನು ದೇವರು, ಧರ್ಮ, ಆಧ್ಯಾತ್ಮದ ಬಗೆಗಿನ ಅವರ ನಿಲುವುಗಳನ್ನು ಸ್ಪಷ್ಟಪಡಿಸುತ್ತವೆ.

"ತಿಕ್ಕಿ ತೀಡಿ ಕಸಗುಡಿಸಿ
ನೀರೆರಚಿ ಹದ ಮಾಡಿ ಮಣ್ಣು
ಬಿಳುಪು ನುಣ್ಣಗಿನ ರಂಗೋಲಿ ಹಿಟ್ಟು
ತೋರು – ಹೆಬ್ಬೆರಳಿನ ಮಧ್ಯೆ
ನಾಜೂಕು ಬೊಟ್ಟು!"[2] (ರಂಗವಲ್ಲಿ)

'ರಂಗವಲ್ಲಿ' ಕವಿತೆಯು ಸ್ತ್ರೀ ಜಗತ್ತಿನ ಸಾಂಸ್ಕೃತಿಕ ಅನನ್ಯತೆಯನ್ನು, ಅವಳ ಆಂತರ್ಯದಲ್ಲಿ ಹುದುಗಿರುವ ಕಲಾವಂತಿಕೆಯ ಅಸ್ಮಿತೆಯನ್ನು ಅತ್ಯಂತ ಧ್ವನಿಪೂರ್ಣವಾಗಿ ಕಟ್ಟಿಕೊಡುತ್ತದೆ. ಇಲ್ಲಿಯ 'ರಂಗವಲ್ಲಿ' ಹೆಣ್ಣಿನ ಚಿತ್ತದ ಚಿತ್ತಾರವನ್ನು ಬಿಡಿಸುತ್ತಲೇ ಒಂದು ಚಿತ್ರಮಯವಾದ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತದೆ. ಇಷ್ಟನ್ನು ಮಾತ್ರ ಹೇಳಿದ್ದರೆ ಕವಿತೆ ಮುಖ್ಯವಾಗುತ್ತಿರಲಿಲ್ಲ. ಅವರಿವರ ಕಾಲ್ತುಳಿತಕ್ಕೆ ಸಿಕ್ಕಿ ನಲುಗುತ್ತಿರುವ ಅನನ್ಯವಾದ ಸ್ತ್ರೀ ಸಂಸ್ಕೃತಿಯ ಬಗ್ಗೆ ಇಲ್ಲಿನ ಸಾಲುಗಳು ಬೆಳಕು ಚೆಲ್ಲುತ್ತವೆ. ಆದರೂ ಮತ್ತದೇ ರೀತಿಯಲ್ಲಿ ನಾಳೆಗೆ ಇನ್ನೂ ಹೊಸತಾಗಿ 'ರಂಗವಲ್ಲಿ' ಮೂಡುತ್ತದೆ ಎನ್ನುವಲ್ಲಿ ಸ್ತ್ರೀ ಆಂತರ್ಯದ ಸಾಂಸ್ಕೃತಿಕ ಬದುಕನ್ನು ಯಾರಿಂದಲೂ ಹೊಸಕಿ ಹಾಕಲು ಸಾಧ್ಯವಿಲ್ಲ ಎಂಬ ಧ್ವನಿ ಕರಾರುವಕ್ಕಾಗಿ ಪಡಿಮೂಡಿದೆ.

ಸೀತೆ ಸಾವಿತ್ರಿ ಅಹಲ್ಯೆ ಎಂದೂ
ಕೇಳದ ಪ್ರಶ್ನೆಗಳು
ದ್ರೌಪದಿ, ಗಾರ್ಗಿ ಸಂಚಿಹೊನ್ನಮ್ಮ
ಕೇಳಿಯೂ ಉಳಿದ ಪ್ರಶ್ನೆಗಳು!
ಆದಿ ಅಂತ್ಯವಿಲ್ಲದೇ
ದಶಮಾನ ಶತಮಾನ ಸಹಸ್ರಮಾನಗಳಿಂದ
ಬಹುಶಃ 'ಈವ್'ಳ ಹುಟ್ಟಿನೊಂದಿಗೇ
ಹುಟ್ಟಿಕೊಂಡ ಉತ್ತರಗಳೇ ಇಲ್ಲದ ಪ್ರಶ್ನೆಗಳು
ಬೆಂಬಿಡದ ಭೂತಗಳು' (ಎಂದೆಂದೂ ಕೇಳಲಾಗದ ಪ್ರಶ್ನೆಗಳು)

ಈ ಕವಿತೆಯ ಸಾಲುಗಳಲ್ಲಿ ಭಾರತೀಯ ಸಮಾಜ ಮತ್ತು ಸಾಂಸ್ಕೃತಿಕ ಪರಂಪರೆಯಲ್ಲಿ 'ಹೆಣ್ಣಾದವಳಿಗೆ ಪ್ರಶ್ನಿಸುವ ಅಧಿಕಾರವಿಲ್ಲ' ಎಂಬ ಸಂಗತಿಯು ವೇದ್ಯವಾಗುತ್ತದೆ. ಸೀತೆ, ಸಾವಿತ್ರಿ, ಅಹಲ್ಯೆ, ದ್ರೌಪದಿ ಇವರಿಗೆಲ್ಲಾ ಆದರ್ಶ ಪತ್ನಿಯರು ಎಂಬ ಪಟ್ಟಕಟ್ಟಿರುವ ಜೊತೆಗೆ ಪ್ರಶ್ನಿಸಬಾರದಂತೆ ಬಾಯಿಕಟ್ಟಿ ನಡೆಸಿಕೊಂಡಿರುವ ಪುರುಷ ಪ್ರಧಾನ ವ್ಯವಸ್ಥೆಯ ಮನೋವಿಕಾರಗಳು ಇಲ್ಲಿ ಕಂಡುಬರುತ್ತದೆ. ಆದರೂ ಕಾಲಕಾಲಕ್ಕೆ ದ್ರೌಪದಿ, ಗಾರ್ಗಿ, ಸಂಚಿಹೊನ್ನಮ್ಮರಂತಹ ಸ್ತ್ರೀಯರು ಅನೇಕ ಬಾರಿ ಪ್ರಶ್ನೆಗಳನ್ನು ಎತ್ತಿದ್ದಾರೆ. ಆ ಪ್ರಶ್ನೆಗಳಿಗೆ ಇಂದೂ ಕೂಡ ಉತ್ತರ ದೊರೆತಿಲ್ಲ ಎನ್ನುವಲ್ಲಿ ಸಮಸಂಸ್ಕೃತಿ ನಿರ್ಮಾಣದಲ್ಲಿ ಮಹಿಳೆಯನ್ನು ಕಡೆಗಣಿಸಲಾಗಿದೆ ಎಂಬ ಭಾವ ಅಭಿವ್ಯಕ್ತಗೊಂಡಿದೆ. ಡಾಟ್ ಕಾಮ್ ಯುಗದ ಈ ನಾಗಾಲೋಟದಲ್ಲಿ ಮಹಿಳೆಯರು ಕೇವಲ ಅಡುಗೆ ಮನೆಗೆ ಸೀಮಿತವಾಗದೆ, ವಿವಿಧ ರಂಗಗಳಲ್ಲಿ ಪಾಲ್ಗೊಂಡು ಪುರುಷನಿಗೆ ಸರಿಸಾಟಿಯಾಗಿ, ಒಂದು ಕೈ ಮೇಲಾಗಿ ದುಡಿಯುತ್ತಿದ್ದರೂ ರಾಷ್ಟ್ರ ಜೀವನಕ್ಕೆ ಅವಳದೇ ಆದ ಕೊಡುಗೆಯನ್ನು ನೀಡುತ್ತಿದ್ದರೂ, ಆಕೆಯ ಆಂತರ್ಯದ ಶಕ್ತಿಯನ್ನು, ಬಹಿರಂಗದ ಯುಕ್ತಿಯನ್ನು ಅರಿಯಲಾಗದೆ, ಅರಿತರೂ ಒಪ್ಪಿಕೊಳ್ಳಲಾಗದ ಮನೋಧೋರಣೆಯನ್ನು ಲೇಖಕರು ಪ್ರಶ್ನಿಸುತ್ತಾರೆ. ಆದರೆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ ವಿನಹ ಉತ್ತರ ಮಾತ್ರ ದೊರಕುವುದಿಲ್ಲ ಎನ್ನುತ್ತಾರೆ. ಈ ಸಂದರ್ಭದಲ್ಲಿ ನಮ್ಮ ಸಾಂಸ್ಕೃತಿಕ ಪರಂಪರೆಯ ಉದ್ದಕ್ಕೂ ಅಲ್ಲೊಮ್ಮೆ, ಇಲ್ಲೊಮ್ಮೆ ಕೆಲವು ಸ್ತ್ರೀಯರು ಪುರುಷ ಕೇಂದ್ರಿತ ವ್ಯವಸ್ಥೆಯನ್ನು ಪ್ರಶ್ನೆ ಮಾಡುವ ಕೆಚ್ಚನ್ನು ತೋರಿದ್ದಾರೆ. ಈ ಕೆಚ್ಚುಮೆಚ್ಚುಗಳನ್ನು ಪ್ರಸ್ತುತ ಸ್ತ್ರೀ ಸಮಾಜ ತನ್ನಲ್ಲಿ ಆಹ್ವಾನಿಸಿಕೊಳ್ಳುವ ಮುಖೇನ ಸಮಸಂಸ್ಕೃತಿಯ ನಿರ್ಮಿತಿಯಲ್ಲಿ ತನ್ನ ಅನನ್ಯತೆಯನ್ನು, ಅಂತರಾಳದ ಶಕ್ತಿ, ಯುಕ್ತಿಗಳನ್ನು ಪ್ರಕಟಿಸುವ ಮುಖೇನ ಯುಗ ಚಕ್ರ ಪರಿವರ್ತನೆಗೆ ಮುಂದಾಗಬೇಕೆಂದು ಹಂಬಲಿಸುವ ಮನಸ್ಸು ರೂಪ ಹಾಸನ ಅವರದು.

ಒಟ್ಟಾರೆ, ರೂಪ ಹಾಸನ ಅವರ ಕಾವ್ಯ ಮನೋಧರ್ಮ ಮೂರ್ತದಿಂದ ಅಮೂರ್ತದೆಡೆಗೆ, ಅನುಭವದಿಂದ ಅನುಭಾವದೆಡೆಗೆ ಚಲಿಸುತ್ತಿರುವ ಪರಿಯನ್ನು ಅನೇಕ ಕವಿತೆಗಳಲ್ಲಿ ಗುರುತಿಸಬಹುದಾಗಿದೆ. ಇವರ ಬಹುತೇಕ ಕವನಗಳು ಸ್ತ್ರೀ ಬದುಕಿನ ಅನನ್ಯತೆಯನ್ನು ಕಟ್ಟಿಕೊಡುತ್ತಲೇ, ಸಂಸ್ಕೃತಿ ನಿರ್ಮಾಣದಲ್ಲಿ ಆಕೆಯ ಪಾತ್ರವನ್ನು ಎತ್ತಿಹಿಡಿಯುತ್ತಾರೆ. ವಿಶಾಲವಾದ ಸಾಂಸ್ಕೃತಿಕ ಪರಿಸರ ನಿರ್ಮಾಣಗೊಂಡಾಗ ಮಾತ್ರ ಅದನ್ನು ಸಮಸಂಸ್ಕೃತಿಯೆಂದು ಪರಿಗಣಿಸಲಾಗುತ್ತದೆ ಎನ್ನುವುದು ಲೇಖಕರ ಅಭಿಮತವಾಗಿದೆ. ಅಂದರೆ, ಸ್ತ್ರೀಯನ್ನು ಒಳಗೊಂಡಂತೆ ಎಲ್ಲವನ್ನೂ ಒಳಗು ಮಾಡಿಕೊಳ್ಳುವ ಸಂಸ್ಕೃತಿ ಚಿಂತನೆ ನವಸಮಾಜದ ಸ್ಥಾಪನೆಗೆ ಭದ್ರ ನೆಲೆಯಾಗಬೇಕು ಎನ್ನುವುದು ಕವಯಿತ್ರಿಯವರ ಚಿಂತನೆಯಾಗಿದೆ. ಲೇಖಕರೇ ಹೇಳಿರುವಂತೆ "ಕೇವಲ ಶಿಷ್ಟವಾದುದನ್ನು ಮಾತ್ರ ಶ್ರೇಷ್ಠ ಸಂಸ್ಕೃತಿ ಎಂದು ಪರಿಭಾವಿಸದೆ ಸಾಮಾಜಿಕ ಸ್ತರ ವಿನ್ಯಾಸದಲ್ಲಿ ತಳಸಮುದಾಯಗಳ – ತಳವರ್ಗಗಳ ಜೀವನ ಸಂಸ್ಕೃತಿಯನ್ನು ಶೋಧಿಸುವ ಮುಖೇನ ನಮ್ಮ ಸಂಸ್ಕೃತಿ ಚಿಂತನೆಯ ವ್ಯಾಪ್ತಿ ವಿಸ್ತಾರಗೊಳ್ಳಬೇಕು".

**ಕೊನೆ ಟಿಪ್ಪಣಿಗಳು :**

೧. ಬಾಗಿಲಾಚೆಯ ಮೌನ – ರೂಪ ಹಾಸನ – ಪುಟ ಸಂಖ್ಯೆ – ೬೪, ೨೦೦೫.

೨. ಒಂದಿಷ್ಟು ಹಸಿಮಣ್ಣು – ರೂಪ ಹಾಸನ – ಪುಟ ಸಂಖ್ಯೆ – ೩೧, ೨೦೦೦

೩. ಕಡಲಿಗೆಷ್ಟೊಂದು ಬಾಗಿಲು – ರೂಪ ಹಾಸನ – ಪುಟ ಸಂಖ್ಯೆ – ೯೬, ೨೦೧೦.

೪. ಕಡಲಿಗೆಷ್ಟೊಂದು ಬಾಗಿಲು – ರೂಪ ಹಾಸನ – ಪುಟ ಸಂಖ್ಯೆ – ೭೦, ೨೦೧೦.

೫. ಕಡಲಿಗೆಷ್ಟೊಂದು ಬಾಗಿಲು – ರೂಪ ಹಾಸನ – ಪುಟ ಸಂಖ್ಯೆ – ೫೫, ೨೦೧೦.

೬ ಕಡಲಿಗೆಷ್ಟೊಂದು ಬಾಗಿಲು – ರೂಪ ಹಾಸನ – ಪುಟ ಸಂಖ್ಯೆ – ೫೧, ೨೦೧೦.

೭ ಒಂದಿಷ್ಟು ಹಸಿಮಣ್ಣು – ರೂಪ ಹಾಸನ – ಪುಟ ಸಂಖ್ಯೆ – ೪೬, ೨೦೦೦.

೮. ಒಂದಿಷ್ಟು ಹಸಿಮಣ್ಣು – ರೂಪ ಹಾಸನ – ಪುಟ ಸಂಖ್ಯೆ – ೫೭, ೨೦೦೦.

ಅಧ್ಯಾಯ ೬

## ರೂಪ ಹಾಸನ ಅವರ ಬದುಕು – ಬರೆಹ (ಕಾವ್ಯ)

೨೧ನೇ ಶತಮಾನದಲ್ಲಿ ಕನ್ನಡ ಕಾವ್ಯ ಜಗತ್ತಿಗೆ ಪಾದಾರ್ಪಣೆ ಮಾಡಿರುವ ರೂಪ ಹಾಸನ ಅವರು ಸಾಹಿತ್ಯವು ಮನುಷ್ಯರ ವಿವೇಕವನ್ನು, ಅಂತಃಕರಣವನ್ನು, ಮಾನವೀಯ ಮನೋಧರ್ಮವನ್ನು ಬೆಳೆಸಬೇಕೆಂಬ ಉತ್ಕಟಭಾವದೊಂದಿಗೆ ಬರೆಯುತ್ತಿರುವ ಒರ್ವ ಮಹತ್ವಪೂರ್ಣ ಲೇಖಕರು. ಬದುಕಿನ ಅನುಭವಗಳನ್ನು, ತುಡಿತ–ಮಿಡಿತಗಳನ್ನು ಪ್ರತಿಮಾತ್ಮವಾಗಿಸಿಕೊಂಡು ಕವಿತೆ ಕಟ್ಟುವುದು ರೂಪರವರ ಕಾವ್ಯಶೈಲಿಯಾಗಿದೆ. ಇವರ ಬದುಕು ಮತ್ತು ಬರೆಹವನ್ನು ಅವಲೋಕಿಸಿದಾಗ ಎರಡರ ನಡುವೆ ಸಾವಯವ ಸಂಬಂಧ ಇರುವುದನ್ನು ಗುರುತಿಸಬಹುದಾಗಿದೆ. ಇಲ್ಲಿ ಕವಿತೆಯ ರಚನೆಗೆ ಸಮಗ್ರ ಜೀವನವೇ ಸ್ಫೂರ್ತಿಯ ಸೆಲೆಯಾಗಿ ಪರಿಣಮಿಸುತ್ತದೆ. ತಮ್ಮ ಬಾಲ್ಯದಿಂದ ಕಂಡುಂಡ ಅನುಭವಗಳನ್ನು, ಯಾತನೆ–ನೋವುಗಳನ್ನು ತಮ್ಮ ಕವಿತೆಗಳ ಮುಖೇನ ಸಂವೇದಿಸಿಕೊಳ್ಳುತ್ತಾರೆ. ಲೇಖಕರು ಮೂಲತಃ ಸಾಹಿತ್ಯದ ವಿದ್ಯಾರ್ಥಿಯಾಗಲೀ, ಅಥವಾ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರಲ್ಲ. ಬಿ.ಕಾಂ. ಪದವೀಧರರಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ತಮ್ಮೊಳಗೆ ಅಂತರ್ಗತ ಮಾಡಿಕೊಂಡು ಕಾವ್ಯಕೃಷಿಯನ್ನು ರಕ್ತಗತ ಮಾಡಿಕೊಂಡು ಬರೆಯುತ್ತಿರುವ ವಿಶಿಷ್ಟ ಕವಯಿತ್ರಿಯಾಗಿ ನಮ್ಮ ಮುಂದೆ ನಿಲ್ಲುತ್ತಾರೆ.

ರೂಪಹಾಸನಅವರ ಪಾಲಿಗೆ ಕಾವ್ಯನಿರ್ಮಿತಿ ಎಂದರೆ ದಂತಗೋಪುರದಲ್ಲಿ ಕುಳಿತು, ಮನಸ್ಸಿಗೆ ತೋಚಿದ್ದನ್ನು ಗೀಚುವ ಚಟದವರಲ್ಲ. ಬದುಕನ್ನು ಆಳವಾಗಿ ಪ್ರೀತಿಸುವ ಲೇಖಕರು ತಮ್ಮ ಸುತ್ತಲಪರಿಸರದ ಸನ್ನಿವೇಶಗಳಿಗೆ, ಒತ್ತಡಗಳಿಗೆ ಒಳಗಾಗಿ ಕವಿತೆಗಳನ್ನು ಕಟ್ಟಿರುವುದು ಇವರ ಬರವಣಿಗೆಯ ಜೀವಂತಿಕೆಯಾಗಿದೆ. ಮೂಲತಃ ಸಮಾಜಸೇವಕರಾಗಿ ಮಹಿಳೆಯರು, ಮಕ್ಕಳು, ವಿಕಲಚೇತನರ ಬಗ್ಗೆ ಕಳಕಳಿಯನ್ನು ಇಟ್ಟುಕೊಂಡು ಅವರ ಜೀವನ ಸುಧಾರಣೆಗಾಗಿ ದುಡಿಯುತ್ತಿರುವ ಇವರ ಸಾಮಾಜಿಕ ಪ್ರಜ್ಞೆ ಕವಿತೆಗಳ ಹುಟ್ಟಿಗೆ ಕಾರಣೀಭೂತವಾಗಿದೆ. 'ಪ್ರೇರಣಾ ವಿಕಾಸ ವೇದಿಕೆ' ಮತ್ತು 'ಮಾನುಷಿ' ಟ್ರಸ್ಟ್‌ನ ಮುಖೇನ ಗ್ರಾಮೀಣ ಮಹಿಳೆಯರ ಮತ್ತು ಮಕ್ಕಳ ಶಿಕ್ಷಣದ ಬಗ್ಗೆ ಒಂದಲ್ಲ ಒಂದು ಕಾರ್ಯಕ್ರಮಗಳನ್ನು ರೂಪಿಸುತ್ತಾ ಬರೆಹಗಾರನೊಬ್ಬ ಹೇಗೆ ಸಾಮಾಜಿಕ ಪರಿವರ್ತನೆಗೆ ದುಡಿಯಬಹುದೆಂಬ ಸಂಗತಿಯನ್ನು ತೋರಿಸಿಕೊಟ್ಟಿದ್ದಾರೆ. ಹಾಸನದ 'ಮನೆಮನೆ ಕವಿಗೋಷ್ಠಿ' ಕಾರ್ಯಕ್ರಮಗಳು ಏರ್ಪಡಿಸುವ ಮುಖೇನ ಜನಸಾಮಾನ್ಯರಲ್ಲಿ ಅಂತರ್ಗತವಾಗಿರುವ ಕಾವ್ಯ ಮನೋಧರ್ಮಕ್ಕೆ ನೀರೆರೆದು ಪೋಷಿಸುತ್ತಿರುವುದು ಲೇಖಕರ ಸಾಹಿತ್ಯಭಿರುಚಿಯನ್ನು, 'ಸೃಜನಶೀಲ' ಪ್ರಜ್ಞೆಯನ್ನು ಗುರುತಿಸಬಹುದಾಗಿದೆ. ಮುಖ್ಯವಾಗಿ ಮಹಿಳೆಯನ್ನು ಸಾಮಾಜಿಕವಾಗಿ, ಆರ್ಥಿಕವಾಗಿ,

ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಸಬಲೀಕರಣ ಮಾಡುವ ಮಹತ್ವಾಕಾಂಕ್ಷೆಯಿಂದ ಅವರಿಗಾಗಿ ಶ್ರದ್ಧೆ ಮತ್ತು ಪ್ರಾಮಾಣಿಕತೆಯಿಂದ ದುಡಿಯುತ್ತಿದ್ದಾರೆ. ಈ ಸಂದರ್ಭದಲ್ಲಿ ಅವರ ಮನಸ್ಸನ್ನು ಕಲಕುವ, ಹೃದಯಸ್ಪರ್ಶಿ ಸಂಗತಿಗಳನ್ನು ತಮ್ಮ ಅಂತರಾಳಕ್ಕೆ ತಂದುಕೊಂಡು, ಹೃದಯ ತುಂಬಿ ಚೆನ್ನಾಗಿ ಹದಗೊಳಿಸಿದ ಅನಂತರವಷ್ಟೇ ಕವಿತೆಯಾಗಿಸುವ ಕಲಾವಂತಿಕೆಯನ್ನು, ಕಾವ್ಯ ಸಿದ್ಧಿಯನ್ನು ಇವರ ಬರೆವಣಿಗೆಯ ಉದ್ದಕ್ಕೂ ಗಮನಿಸಬಹುದಾಗಿದೆ.

ಕವಯಿತ್ರಿ ರೂಪರವರ ಕಾವ್ಯ ರಾಶಿಯನ್ನು ಸ್ತ್ರೀವಾದದ ನೆಲೆಯಲ್ಲಿ ಚರ್ಚೆಗೊಳಪಡಿಸಿದರೆ, ವಿಮರ್ಶೆಯು ಅವರ ಕಾವ್ಯದ ಅಂತರಂಗವನ್ನು ಮುಟ್ಟಲು ಸಾಧ್ಯವಾಗುವುದಿಲ್ಲ. ಅದಕ್ಕೆ ಬದಲಾಗಿ ಕವಿತೆಗಳಲ್ಲಿ ವ್ಯಕ್ತಗೊಂಡಿರುವ ಸ್ತ್ರೀಸಂವೇದನೆಗಳನ್ನು, ಹೆಣ್ಣಿನಬದುಕಿನ ಅನನ್ಯತೆಯನ್ನು, ಅವಳ ಮನೋಧರ್ಮದ ಅಸ್ಮಿತೆಯನ್ನು ವಿಮರ್ಶಾಲೋಕ ಗುರುತಿಸಿದಾಗ ಮಾತ್ರ ರೂಪರವರ ಕಾವ್ಯದ ಉತ್ಕೃಷ್ಟತೆಯನ್ನು, ನೆಲೆಬೆಲೆಯನ್ನು ಮನಗಾಣಲು ಪ್ರೇರಣೆಯಾಗುತ್ತದೆ. ಸ್ತ್ರೀ ಬರೆದ ಸಾಹಿತ್ಯವನ್ನು 'ಸ್ತ್ರೀವಾದಿ' ಎಂತಾಗಲಿ, ಪುರುಷ ಬರೆದ ಸಾಹಿತ್ಯವನ್ನು 'ಸಾರ್ವತ್ರಿಕ ಅಭಿವ್ಯಕ್ತಿ' ಎಂದಾಗಲಿ, ಒಂದು ಸೀಮಿತ ಚರ್ಚೆಗೆ ಒಳಗುಮಾಡದೆ, ಸೃಜನಶೀಲ ಪ್ರಜ್ಞೆಯೊಂದರ ಅಭಿವ್ಯಕ್ತಿ ಎಂಬುದಾಗಿ ತಿಳಿಯಬೇಕೆನ್ನುವುದು ಈಚಿನ ವಿಮರ್ಶೆ ಕಂಡುಕೊಂಡಿರುವ ಸತ್ಯವಾಗಿದೆ. ಈ ಹಿನ್ನೆಲೆಯಲ್ಲಿ ರೂಪ ಹಾಸನ ಅವರ ಕವಿತೆಗಳಲ್ಲಿ ಸ್ತ್ರೀವಾದವಿದೆ, ಸ್ತ್ರೀ ಸಂವೇದನೆಗಳ ಹರಳುಗಟ್ಟಿದೆ. ಅದೇಸಂದರ್ಭದಲ್ಲಿ ವ್ಯಾಪಕವಾಗಿ ಪ್ರತಿಪಾದಿತಗೊಂಡು ಸ್ತ್ರೀವಾದಿ ಹಣೆಪಟ್ಟಿಯಿಂದ ಪಾರಾಗಲು ಕವಯಿತ್ರಿಯವರಿಗೆ ಸಾಧ್ಯವಾಗಿದೆ. ಅವರೇ ಹೇಳಿಕೊಂಡಿರುವಂತೆ "ನನ್ನದು ಮನುಷ್ಯೆಯೊಬ್ಬಳು ಸೃಷ್ಟಿಸಿದ ಸಾಹಿತ್ಯ ಎಂದು ನೋಡುವುದು ಸೂಕ್ತ ಎಂದಿದ್ದಾರೆ. ಅಂದ ಮಾತ್ರಕ್ಕೆ, ಸಂಸ್ಕೃತಿಯೊಳಗಿನ ಅನಾಚಾರಗಳನ್ನು ಪ್ರಶ್ನಿಸದೇ ಬಿಟ್ಟಿಲ್ಲ. ಲೇಖಕರು ಗ್ರಹಿಸಿರುವಂತೆ ಪುರುಷನಲ್ಲಿರುವ 'ಹೆಣ್ಣುತನ'ವನ್ನು ಅದೇ ರೀತಿ ಹೆಣ್ಣಿನಲ್ಲಿರುವ 'ಗಂಡುತನ'ವನ್ನು ಕಂಡುಕೊಂಡಾಗ ಮಾತ್ರ ಸಮಸಂಸ್ಕೃತಿ ನಿರ್ಮಿತಿಗೆ ಇವರೀರ್ವರ ಬೌದ್ಧಿಕ ಶಕ್ತಿಯನ್ನು ಬಳಸಿಕೊಳ್ಳಲು ಸಾಧ್ಯವಾಗುತ್ತದೆ" ಎನ್ನುತ್ತಾರೆ. ಇವರ ಮಾತುಗಳಿಗೆ ಪೂರಕವಾಗಿ ಡಾ. ವಿಜಯದಬ್ಬೆ ಅವರ ಚಿಂತನೆಗಳನ್ನು ಇಲ್ಲಿ ಪ್ರಸ್ತಾಪಿಸಬಹುದು[೧]. "ಸ್ತ್ರೀವಾದಿ ಪ್ರಜ್ಞೆಯ ಅರಳುವಿಕೆ : ಪುರುಷಕೇಂದ್ರಿತ ಗ್ರಹಿಕೆಯ ಮಿತಿ ಮತ್ತು ಅಪಾಯಗಳನ್ನು ತೆರೆದುತೋರುತ್ತದೆ. ಜೀವನಸ್ಥಿತಿ ಮತ್ತು ಜೀವಕ್ಕೆ ವಿರುದ್ಧವಾಗಿ ಹರಿಯುವ ಮೌಲ್ಯಪ್ರವಾಹ ಇತಿಹಾಸದ ಒಂದಲ್ಲ ಒಂದು ಘಟ್ಟದಲ್ಲಿ ಅವಕ್ಕೆ ಬೆಲೆ ತೆರಲೇಬೇಕು. ಪುರುಷಕೇಂದ್ರಿತ ನೆಲೆಯಿಂದಾಗಿ ಆ ಬೆಲೆಯನ್ನು ತೆತ್ತಿದ್ದೇವೆ. ಹೆಂಗಸು-ಗಂಡಸಿಬ್ಬರ ಜೀವನದ ವ್ಯಾಪಕತೆಯನ್ನು ಕುಂಠಿತಗೊಳಿಸುವ ಅವರ ಜೀವನವನ್ನು ಕೃತಕವಾಗಿಸಿ ಅರ್ಥಹೀನವಾಗಿಸುವ ಇಬ್ಬರಿಗೂ ದಮನಕಾರಿಯಾದ, ಒಟ್ಟಿನಲ್ಲಿ ಸಮಾಜದ ಪ್ರಗತಿಯ ಸಹಜದಾರಿಯನ್ನು ಮುಟ್ಟುವಿಕೆಯೇ ಹಾಗೆ, ನಾವು ತೆತ್ತ ಬೆಲೆ. ಒಟ್ಟು ಮನುಷ್ಯ ಜೀವನದಲ್ಲಿರುವ ಸಹಜವಾದ ಬೆಳಕು, ಮಾಧುರ್ಯ, ದೃಷ್ಟಿಗಳನ್ನು ಗರಿಷ್ಠತೆಯಲ್ಲಿ ಹೀರಿಕೊಳ್ಳಲಾಗದಂತೆ ಈ ಏಕಮುಖ

ಗ್ರಹಿಕೆ ಮಾಡಿದೆ. ಈ ದೃಷ್ಟಿಯಿಂದಾಗಿ ಗಂಡಸು, ಹೆಂಗಸಿನ ಸ್ವಭಾವವನ್ನು ತಪ್ಪಾಗಿ ತಿಳಿಯಲಾಗಿದೆ. ಆಕ್ರಮಣಶೀಲತೆ, ಸಾಹಸ, ಬಿರುಸು ಮೊದಲಾದವನ್ನು ಗಂಡುಗುಣಗಳೆಂದೂ ಕೋಮಲತೆ, ಮಾರ್ದವತೆ, ಭಯ ಮೊದಲಾದವನ್ನು ಹೆಣ್ಣುಗುಣಗಳೆಂದೂ ಕರೆಯಲಾಗುತ್ತದೆ. ಮನುಷ್ಯನು (ಹೆಂಗಸರೂ ಗಂಡಸರಿಬ್ಬರೂ) ಇವೆರಡೂ ಗುಣಗಳಿಂದ ಕೂಡಿರುತ್ತಾರೆ. ಅವುಗಳಲ್ಲಿ ಯಾರಲ್ಲಿ ಯಾವುದು ಪ್ರಧಾನವೆನ್ನುವುದು ವ್ಯಕ್ತಿತ್ವದ ಸ್ವರೂಪಕ್ಕೆ ಬಿಟ್ಟಿದ್ದು ಎಂಬ ವಸ್ತುಸ್ಥಿತಿಯನ್ನು ಕುರಿತ ಯೂಂಗ್ ಮೊದಲಾದ ಮನೋವಿಜ್ಞಾನಿಗಳ ಗ್ರಹಿಕೆಗೆ ವಿರುದ್ಧವಾಗಿ ಮನುಷ್ಯನ ಜೈವಿಕ ಸ್ವರೂಪದಿಂದಲೇ ಮನಸ್ಸಿನ ಸ್ವರೂಪವನ್ನು ನಿರ್ಣಯಿಸಲಾಯಿತು. ಇದರಿಂದಾಗಿ ಸಂಸ್ಕೃತಿಯಲ್ಲಿ ಗಂಡಸಿನಲ್ಲಿರುವ ಗಂಡುಗುಣಕ್ಕೂ ಹೆಂಗಸಿನಲ್ಲಿರುವ ಹೆಣ್ಣುಗುಣಕ್ಕೂ ಉತ್ತೇಜನ ಸಿಕ್ಕಿತು. ಗಂಡಸಿನಲ್ಲಿರುವ ಹೆಣ್ಣುಗುಣವನ್ನು ಹೆಂಗಸಿನಲ್ಲಿರುವ ಗಂಡುಗುಣವನ್ನು ಉದ್ದೇಶಪೂರ್ವಕವಾಗಿ ಹತ್ತಿಕ್ಕಲಾಯಿತು. ವ್ಯಕ್ತಿತ್ವ ಸ್ವರೂಪದ ಭಿನ್ನತೆಯನ್ನು ಬದಿಗೆ ತಳ್ಳಿ ಸಿದ್ಧವಾದ ಸೂತ್ರವನ್ನು ಎಲ್ಲರ ಮೇಲೂ ಹೇರಲಾಯಿತು. ವ್ಯಕ್ತಿತ್ವದ ಭಿನ್ನತೆಯನ್ನು ಭಿನ್ನತೆಯಾಗಿ ನೋಡದೇ 'ಹೆಣ್ಣಿಗೆ' ಮತ್ತು 'ಗಂಡುಬೀರಿ' ಗಳೆಂದು ಅವರನ್ನು ಕರೆದು, ಅಂಥವರು ಅವರ ಲಿಂಗಜಾತಿಗೆ ಸೇರಲು ಅಯೋಗ್ಯರು ಎಂಬಂತೆ ನಡೆಸಿಕೊಳ್ಳಲಾಯಿತು. ಮಾನ್ಯತೆ ಪಡೆದ ಸಂಸ್ಕೃತಿಯಲ್ಲೂ 'ಗಂಡುಗುಣ'ಕ್ಕೆ ಆದ್ಯತೆ ದೊರೆಯಿತು. ಹೆಂಗಸು ಮತ್ತು ಹೆಂಗಸಿನಗುಣ ಹಿಂದಕ್ಕೆ ತಳ್ಳಲ್ಪಟ್ಟಿತು. ಒಂದು ಜನಪದ ತ್ರಿಪದಿಯಲ್ಲಿ ಮಗಳು ಮದುವೆಯಾಗಿ ಹೋಗುವಾಗ ದುಃಖಿಸುವ ಅಪ್ಪನ ಚಿತ್ರವೊಂದು ಬರುತ್ತದೆ. ಈ ತಂದೆ ಸಣ್ಣ ಶಲ್ಯದಲ್ಲಿ ಮುಸುಕ್ಹಾಕಿ ಕಣ್ಣೀರಿಡುತ್ತಾರೆ. ಸಮಾಜದಲ್ಲಿನ ಈ ಗುಣಗಳ ಮೇಲಿನ ವಿಧಿ ನಿಷೇಧದ ಸ್ಥಿತಿಯನ್ನು ಈ ಚಿತ್ರ ಸಂಕೇತಿಸುತ್ತದೆ ಎನ್ನಬಹುದು. 'ಅಳುವ ಗಂಡಸನ್ನು ನಗುವ ಹೆಂಗಸನ್ನು ನಂಬಬಾರದು' ಎಂಬಂಥ ನುಡಿಗಟ್ಟುಗಳು ಈ ಗುಣಗಳು ಹೇರಲ್ಪಟ್ಟ ರೀತಿಯನ್ನು ಸೂಚಿಸುತ್ತವೆ. ಆಧುನಿಕಕಾಲದಲ್ಲೂ ಗೃಹವಿಜ್ಞಾನ, ಸಂಗೀತ, ಕಲಾವಿಷಯಗಳು ಹುಡುಗಿಯರಿಗೆಂದೂ; ಗಣಿತ, ವಿಜ್ಞಾನ, ತಂತ್ರಜ್ಞಾನ, ವಾಣಿಜ್ಯಶಾಸ್ತ್ರ ಹುಡುಗರಿಗೆಂದೂ ಹೇಗೋ ಹುಟ್ಟಿನಿಂದಲೂ ಅವರಿಬ್ಬರ ಮನೋಧರ್ಮವೇ ಹಾಗಿರುತ್ತದೆಂದು ನಾವು ಭಾವಿಸುತ್ತೇವೆ. ಇಂಥ ವಸ್ತುಸ್ಥಿತಿಯಿಂದ ದೂರವಾದ ನಂಬಿಕೆಗಳಿಗೆ ವಿರುದ್ಧವಾಗಿ ಸ್ತ್ರೀವಾದಿ ಪ್ರಜ್ಞೆಯು ವ್ಯಕ್ತಿತ್ವದ ದ್ವಿಲಿಂಗತ್ವಕ್ಕೆ ಮಾನ್ಯತೆಯನ್ನು ಅಪೇಕ್ಷಿಸುತ್ತದೆ. ಹಾಗೂ ಈಗ ನಾವು ಯಾವುದನ್ನು ಸ್ತ್ರೀಪುರುಷರ ಮೂಲಪ್ರವೃತ್ತಿ ಎಂದು ಬಗೆದಿದ್ದೇವೋ ಅದು ನಮ್ಮ ಸಂಸ್ಕೃತೀಕರಣ, ಸಮಾಜೀಕರಣದಿಂದ ಪ್ರಭಾವಿಸಲ್ಪಟ್ಟದ್ದು ಎಂದು ತಿಳಿಯುತ್ತದೆ. 'ಸ್ತ್ರೀಯಾತ್ಮಕ' ಗುಣಗಳನ್ನು 'ಸ್ತ್ರೀತ್ವದ' ಮೇಲೆ ದೂರಿಸುವುದನ್ನು ವಿರೋಧಿಸಲಾಗಿದೆ. ವ್ಯಕ್ತಿತ್ವದಲ್ಲಿನ ದ್ವಿಲಿಂಗತ್ವಕ್ಕೆ ಹಾಗೂ ಸಂಸ್ಕೃತಿಯಲ್ಲಿನ ದ್ವಿಲಿಂಗತ್ವಕ್ಕೆ ಮಾನ್ಯತೆ ದೊರೆಯುವುದೆಂದರೆ ಕೃತಕ ಸ್ಥಿತಿಯಿಂದ ಸಹಜತೆಯೆಡೆಗೆ ತಿರುಗಿದಂತೆ", ಈ ರೀತಿಯ ಚಿಂತನೆಗಳು ಸಾರ್ವತ್ರಿಕವಾಗಿ ಗ್ರಹಿಕೆಗಳು ರೂಪ ಹಾಸನ ಅವರ ಕಾವ್ಯದಲ್ಲಿ ವಿಭಿನ್ನ ಆಯಾಮಗಳಲ್ಲಿ ಅಭಿವ್ಯಕ್ತಿಗೊಂಡು ಸ್ತ್ರೀವಾದಿ ಪ್ರಜ್ಞೆ ಮತ್ತು

ಪುರುಷಕೇಂದ್ರಿತ ವ್ಯವಸ್ಥೆಯನ್ನು ಪ್ರಶ್ನಿಸುವ ಧಾಟಿ ಪುರುಷರೊಳಗಿನ ಸ್ತ್ರೀತ್ವವನ್ನು ಸ್ತ್ರೀಯರೊಳಗಿನ ಪುರುಷತ್ವವನ್ನು ಅರ್ಥಮಾಡಿಕೊಳ್ಳುವ ನಿಟ್ಟಿನಲ್ಲಿ ಅನೇಕ ಸಾಧ್ಯತೆಗಳನ್ನು ಮುಂದಿಟ್ಟಿದ್ದಾರೆ.

ರೂಪ ಹಾಸನ ಅವರ ಬದುಕು ಮತ್ತು ಬರಹವನ್ನು ಅವಲೋಕಿಸಿದಾಗ, ಅವರ ಬಹುತೇಕ ಕವಿತೆಗಳಲ್ಲಿ ಹೆಣ್ಣಿನ ಬದುಕಿನ ತಲ್ಲಣಗಳು, ಆಕಾಂಕ್ಷೆಗಳು, ಕಂಡುಬರುತ್ತವೆ. ಬಾಗಿಲು ದಾಟಿ ಬೀದಿಗೆ ಬಂದು ಕವಿತೆ ಕಟ್ಟುವ ತುಡಿತ ಅಭಿವ್ಯಕ್ತಗೊಂಡಿದೆ. ಈವರೆಗೆ ಮಹಿಳೆ ಬರೆದ ಸಾಹಿತ್ಯವನ್ನು 'ಅಡುಗೆ ಮನೆ ಸಾಹಿತ್ಯ' ಎಂಬುದಾಗಿ ಲೇವಡಿ ಮಾಡಿ, ಸ್ತ್ರೀ ಅಭಿವ್ಯಕ್ತಿಯನ್ನು ಪೂರ್ವಾಗ್ರಹ ಪೀಡಿತ ಭಾವನೆಯಿಂದ ಕಾಣಲಾಗಿತ್ತು. ಆದರೆ ರೂಪರವರು 'ಅಡುಗೆ ಮನೆ ಸಾಹಿತ್ಯ' ಎಂಬ ಕವಿತೆ ಬರೆಯುವ ಮುಖೇನ ಸ್ತ್ರೀವಾದ ಮತ್ತು ಸ್ತ್ರೀಸಂವೇದನೆಗೆ ಹೊಸ ಆಯಾಮವನ್ನು ಕೊಡಲು ಯತ್ನಿಸಿದ್ದಾರೆ. ಮಹಿಳೆಯ ಬದುಕು ಅಡುಗೆ ಮನೆಯ ಸುತ್ತ ಹೆಣೆದುಕೊಂಡಿದ್ದರೂ, ಅವಳ ಆಂತರ್ಯದ ಶಕ್ತಿಯುಕ್ತಿಗಳು ಮಾತ್ರ ಪ್ರಚಂಡವಾಗಿದ್ದು, ಅದನ್ನು ಮನಗಾಣಬೇಕೆಂದು ಇವರ ಬರವಣಿಗೆ ಅಪೇಕ್ಷಿಸುತ್ತದೆ. ಲೇಖಕರ ಕಾವ್ಯಗಂಗೆಗೆ ಸ್ಫೂರ್ತಿಯ ಉಗಮಸ್ಥಾನವಾಗಿ ಗೋಚರವಾಗುತ್ತದೆ. ಕವಯಿತ್ರಿ ಅವರು ಪ್ರೌಢಶಾಲಾ ಹಂತದಲ್ಲೇ ಕವಿತೆ ಕಟ್ಟಲು ಪ್ರಾರಂಭಿಸಿದರೂ, ಬದುಕು ವಿಸ್ತಾರಗೊಂಡ ನಂತರ, ಮನಸ್ಸಿನಲ್ಲಿ ಅನುಭವಗಳು ಮಾಗಿದ ನಂತರ ಒಂದು ಪರಿಪಕ್ವತೆಯನ್ನು ಪಡೆದುಕೊಂಡು ಬರವಣಿಗೆಯ ಮುಖೇನ ಬದುಕನ್ನು ಅರ್ಥೈಸುವ, ವ್ಯಾಖ್ಯಾನಿಸುವ, ಅದರೊಳಗಿನ ಸಾರವನ್ನು ಹೀರಿಕೊಳ್ಳುವ, ಅದು ಇದ್ದ ಹಾಗೆಯೇ ಸ್ವೀಕರಿಸುವ ಮನೋಧೋರಣೆಗಳು, ಹಂಬಲಗಳು ಇವರ ಕವಿತೆಗಳಲ್ಲಿ ಅಂತರ್ಗತಗೊಂಡಿವೆ. ಇವರ ಪಾಲಿಗೆ ಸಮಗ್ರ ಬದುಕೇ ಕಾವ್ಯವಾಗುತ್ತದೆ; ಅಭಿವ್ಯಕ್ತಿಯ ಸಾಧನವಾಗುತ್ತದೆ. ಮೂರ್ತವನ್ನು ದಾಟಿ ಅಮೂರ್ತದ ಕಡೆಗೆ ಇವರ ಲೇಖನಿ ಚಲಿಸುತ್ತದೆ. ಬದುಕಿನ ಜಂಜಾಟಗಳ ನಡುವೆಯೂ, ಸಮಾಧಾನ ಕಂಡುಕೊಳ್ಳುವ, ನೊಂದ ಜೀವಗಳಿಗೆ ಆತ್ಮವಿಶ್ವಾಸ ತುಂಬುವ ಕಾರ್ಯವನ್ನು ಮಾಡುತ್ತಾರೆ. ಕಾರಣ, ಲೇಖಕರು ಸಮಾಜ ಕೇಂದ್ರಿತವಾಗಿ ಒಂದು ಮುನ್ನೋಟವನ್ನು ತಮ್ಮೊಳಗೆ ಆಹ್ವಾನಿಸಿಕೊಂಡು ಕಾವ್ಯಕೃಷಿಯಲ್ಲಿ ತೊಡಗಿದ್ದಾರೆ. ಇವರ ಕಾವ್ಯ ಯಾವುದೋ ಅವ್ಯಕ್ತವಾದ, ಜಟಿಲವಾದ, ರೀತಿಯಲ್ಲಿ ಸಾಗುವುದಿಲ್ಲ. ಪ್ರತಿಮೆ-ರೂಪಕಗಳನ್ನು ಬಳಸಿಕೊಂಡರೂ ಅವುಗಳ ಆಯ್ಕೆ ಸುತ್ತಲ ಪರಿಸರದ ಪರಿಕರಗಳೇ ಆಗಿರುತ್ತವೆ ಎನ್ನುವುದು ವಿಶಿಷ್ಟವಾಗಿದೆ.

ಕವಿಯತ್ರಿ ರೂಪರವರ ಕಾವ್ಯ ಕತ್ತಲೆಯ ಗರ್ಭವನ್ನು ಸೀಳಿ, ಬೆಳಕು ತಬ್ಬುವ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತದೆ. ಸ್ಥಾಪಿತ ಮೌಲ್ಯಗಳನ್ನು ಪ್ರಶ್ನಿಸುವ ಮೂಲಕ ಬದಲಾವಣೆಯತ್ತ ಇವರ ಕವಿತೆಗಳು ಮುಖ ಮಾಡಿವೆ ಇವರ ದೃಷ್ಟಿಯಲ್ಲಿ ಬದಲಾವಣೆ ಎಂದರೆ "ಈಗಿರುವ ವ್ಯವಸ್ಥೆಯ ಪಲ್ಲಟ ಮತ್ತು ಸಮಾಜೋ ಆರ್ಥಿಕ ಸಮಾನತೆಯಿಂದ ಉಭಯಲಿಂಗಿ ಪ್ರಧಾನ ಮತ್ತು ಮನುಷ್ಯ ಮನುಷ್ಯನನ್ನು ಗೌರವಿಸುವ, ಪ್ರೀತಿಸುವ ಆದರಿಸುವ ಮೌಲ್ಯಗಳ ಸ್ಥಾಯೀತ್ವದ ಪರ್ಯಾಯ ಸಮಾಜ ವ್ಯವಸ್ಥೆಯನ್ನು

ರಚಿಸುವ ಮೂಲಕ ಸ್ತ್ರೀಪುರುಷರ ಅಂತರಂಗದ ಅನನ್ಯತೆಯನ್ನು ಯಾವುದೇ ಪೂರ್ವಾಗ್ರಹ ಭಾವನೆಗಳಿಗೆ ಒಳಗಾಗದೇ, ಅನಾವರಣಗೊಳಿಸಬೇಕೆಂದು ತನ್ಮೂಲಕ ಸಮತ ಸಮಾಜವನ್ನು ಕಟ್ಟುವುದಾಗಿದೆ." ಲೇಖಕರು ಎಲ್ಲಿಯೂ ಕೂಡ ಪುರುಷ ಕೇಂದ್ರಿತ ಸಮಾಜವನ್ನು ಉಗ್ರವಾಗಿ ಟೀಕಿಸದೇ, ಸೌಮ್ಯವಾದ ನೆಲೆಯಲ್ಲಿ ಪ್ರಶ್ನಿಸುವ ಮನೋವೈಖರಿಯನ್ನು ಪ್ರಕಟಿಸಿದ್ದಾರೆ. ಅಂದ ಮಾತ್ರಕ್ಕೆ ಇವರ ಕವಿತೆಗಳು ಯಾವುದೋ ಸ್ಥಾಪಿತ ವ್ಯವಸ್ಥೆಯ ಎದುರು ತಲೆಕೆರೆದುಕೊಂಡು ನಿಲ್ಲುವುದಿಲ್ಲ. ಸ್ತ್ರೀಬದುಕನ್ನು ಅನಾವರಣಗೊಳಿಸುತ್ತಲೇ ಸಮಗ್ರವಾದ ಜೀವನದೃಷ್ಟಿಯನ್ನು ಕಟ್ಟಿಕೊಡುತ್ತದೆ. ಈ ರೀತಿಯ ಮನೋಧೋರಣೆ ಸೃಜನಶೀಲ ಪ್ರಜ್ಞೆಯೊಂದರ ಮುಖ್ಯ ಕಾಳಜಿಯಾಗಿ ಕಂಡುಬರುತ್ತದೆ.

ರೂಪ ಹಾಸನ ಅವರ ಕಾವ್ಯ ಸ್ತ್ರೀಪುರುಷರೀರ್ವರ ನೆಲೆಯನ್ನು ದಾಟಿ, ಅನುಭವಜನ್ಯವಾದ ಅನುಭವವನ್ನು ವಿವರಿಸುವಾಗ ದಾಸಿಮಯ್ಯನ ವಚನ ನೆನಪಿಗೆ ಬರುತ್ತದೆ. "ಮೊಲೆಮೂಡಿ ಬಂದರೆ ಹೆಣ್ಣೆಂಬರು; ಗಡ್ಡಮೀಸೆ ಬಂದರೆ ಗಂಡೆಂಬರು; ನಡುವೆ ಸುಳಿವಾತ್ಮನು, ಗಂಡೂ ಅಲ್ಲ, ಹೆಣ್ಣೂ ಅಲ್ಲ ಕಾಣಾ ರಾಮನಾಥ".[೨] ಈ ವಚನದ ಗ್ರಹಿಕೆಯನ್ನು ಅರ್ಥವಂತಿಕೆಯನ್ನು ತಾತ್ವಿಕ ವಿಚಾರಗಳನ್ನು ರೂಪರವರ ಅನೇಕ ಕವಿತೆಗಳಲ್ಲಿ ಗುರುತಿಸಬಹುದಾಗಿದೆ. ಒಟ್ಟಾರೆ, ಲೇಖಕರ ಬದುಕು ಮತ್ತು ಬರವಣಿಯಲ್ಲಿ ಸಮಗ್ರ ಜೀವನದೃಷ್ಠಿ ಪ್ರಕಟಗೊಂಡಿರುತ್ತದೆ. ಸ್ತ್ರೀ ಅಸ್ಮಿತೆಯನ್ನು ಸೃಜಿಸುವುದು ಮುಖ್ಯ ಧೋರಣೆಯಾಗಿದ್ದರೂ, ಅನೇಕ ಕವಿತೆಗಳಲ್ಲಿ ಸಾರ್ವತ್ರಿಕವಾದುದು ಜೀವನ ಮೌಲ್ಯಗಳು, ಮಾನವ ಬದುಕಿನ ವಿಭಿನ್ನ ಆಯಾಮಗಳು ವಿಸ್ತಾರವಾದ ಅನುಭವದೊಂದಿಗೆ, ಬುದ್ಧಿಭಾವಗಳ ಮಿಳಿತದೊಂದಿಗೆ ಪರಿಣಾಮಕಾರಿ ಪ್ರತಿಮಾ ವಿಧಾನದಲ್ಲಿ ಮೈದಳೆದಿದ್ದು, ಬದುಕು ಮತ್ತು ಬರವಣಿಗೆಯ ನಡುವಿನ ಸಾವಯವ ಸಂಬಂಧವನ್ನು ಇವರ ಅನೇಕ ಕವಿತೆಗಳು ಕಟ್ಟಿಕೊಡುತ್ತವೆ. ಕಾವ್ಯದ ಹುಟ್ಟು ಮತ್ತು ವಸ್ತುವಿನ ಬಗ್ಗೆ ಲೇಖಕರೇ ಹೇಳಿಕೊಂಡಿರುವ ಮಾತುಗಳು ಔಚಿತ್ಯಪೂರ್ಣವಾಗಿವೆ. ಅಲ್ಲದೆ, ಬದುಕು ಮತ್ತು ಸಾಹಿತ್ಯದ ನಡುವಿನ ಅಪ್ಯಾಯಮಾನವಾದ ನಂಟಸ್ತಿಕೆಯನ್ನು ಆ ಮಾತುಗಳು ಪ್ರಚುರಪಡೆಸುತ್ತವೆ. ಕಾವ್ಯವನ್ನು ಕುರಿತಂತೆ ಲೇಖಕರ ಮಾತುಗಳೆಂದರೆ "ಕವಿತೆ ಸದಾ ನನ್ನ ಆಪ್ತ ಆತ್ಮಸಂಗಾತಿ ಮತ್ತು ಅಂತರಂಗದ ಗುರು, ಅದಕ್ಕೆ ನನ್ನ ನೋವು, ಸಂಕಟ, ಸಂತಸ, ವಿಷಾದ, ಮೌನ, ಸಿಟ್ಟು ಎಲ್ಲವೂ ಅರ್ಥವಾಗುತ್ತದೆ. ಅದರೊಂದಿಗೆ ನನ್ನ ಪ್ರೀತಿ ಹಂಚಿಕೊಳ್ಳುತ್ತಾ, ಜಗಳವಾಡುತ್ತಾ, ಹಠಮಾಡುತ್ತಾ, ಪ್ರಶ್ನಿಸಿ ಕಾಡಿಸುತ್ತಾ, ಹುಚ್ಚು ತೋಡಿಕೊಳ್ಳುತ್ತಾ ನಾನಿರುವಂತೆಯೇ ನನ್ನನ್ನು, ಸುತ್ತಲ ಪ್ರಪಂಚವನ್ನು ನನ್ನೊಳಗೆ ವಿವರಿಸಿಕೊಳ್ಳಲು, ಪರಿಭಾವಿಸಿಕೊಳ್ಳಲು ಪ್ರಯತ್ನಿಸುತ್ತಾ ಬಂದಿದ್ದೇನೆ. ಸೃಷ್ಟಿ ಸತ್ಯಗಳು ಪರಿಭಾವಿಸಿಕೊಳ್ಳಲು ಪ್ರಯತ್ನಿಸುತ್ತಾ ಬಂದಿದ್ದೇನೆ. ಸೃಷ್ಟಿ ಸತ್ಯಗಳು ವೈಚಿತ್ರ್ಯಗಳು, ಮನುಷ್ಯ ಸಹಜತೆಯನ್ನು ಒಡೆಯುವ ಲೋಕ ರಾಜಕಾರಣಿಗಳು, ಮುಖವಾಡದೊಳಗಿನ ಕಪಟ ಮನಸುಗಳು, ಸಂವೇದನೆ ಕಳೆದುಕೊಂಡ ಜೀವಗಳು, ಸದ್ದಿಲ್ಲದೇ ಪಲ್ಲಟಗೊಳ್ಳುವ ಮೌಲ್ಯಗಳು, ನಂಬಿಕೆಯಾಚೆಗಿನ ಸತ್ಯಗಳು ನನ್ನೊಳಗಿಳಿದು ಕಾಡುವಾಗ,

ಮಾನವೀಯ ಸಾಧ್ಯತೆಯ, ಅಂತಃಕರಣದ ಸೆಲೆಯ ಹುಡುಕಾಟದಲ್ಲಿ ನನಗೆ ನನ್ನ ಕವಿತೆ ಸಂತೈಕೆಯಾಗಿ, ಸಮಾಧಾನವಾಗಿ, ಬಿಡುಗಡೆಯಾಗಿ, ಸಹಜ ಮುಕ್ತ ದಾರಿಯಾಗಿ ಕಂಡಿದೆ. ಕವಿತೆಯೆಂದರೆ, ದಂತಗೋಪುರದಲ್ಲಿ ಕುಳಿತು ಭ್ರಮಾಲೋಕದಲ್ಲಿ ವಿಹರಿಸುತ್ತಾ, ನನಗೂ ಹೊರ ಪ್ರಪಂಚಕ್ಕೂ ಸಂಬಂಧವಿಲ್ಲವೆಂಬ ನಿರಾಕರಣೆಯಿಂದ ಪದಗಳನ್ನು ಕಟ್ಟುವ ಆಟ ಅಲ್ಲವೆಂದು ಭಾವತೀವ್ರತೆಯಲ್ಲಿ ತಾನಾಗಿಯೇ ಅನಿವಾರ್ಯವಾಗಿ ಹುಟ್ಟುವ ಪ್ರಾಮಾಣಿಕ ಅಭಿವ್ಯಕ್ತಿಯೆಂದು ನಂಬಿದ್ದೇನೆ. ಅದಕ್ಕೆ ನಯವಾದ ಹೊರ ಕವಚವನ್ನು ತೊಡಿಸಿದ ಕುಸುರಿಯನ್ನಷ್ಟೇ ನಾನು ಬುದ್ಧಿಪೂರ್ವಕವಾಗಿ ಮಾಡುತ್ತಾ ಬಂದಿದ್ದೇನೆ. ಮಿಕ್ಕಂತೆ ಸಹಜ ಪ್ರಸವದ ಅಂತಹ ಅನೂಹ್ಯ ಕ್ಷಣಗಳಿಗಾಗಿ ತಾಳ್ಮೆಯಿಂದ ಕಾದಿದ್ದೇನೆ. ನನ್ನ ಅಂತರಂಗದ ಗುರುವಾಗಿ ಕವಿತೆ, ಹೊರಗಿನ ಕೃತಕತೆಗೆ ತಲೆಬಾಗದೇ ನನ್ನೊಳಗಿನ ನೈಜತೆಗೆ ಮುಖಾಮುಖಿಯಾಗುವುದನ್ನು ಕಲಿಸಿದೆ. ಅದು ನನ್ನೊಳಗೆ ನೋವನ್ನೆದುರಿಸುವ ಆತ್ಮವಿಶ್ವಾಸವನ್ನೂ, ಜೀವನ ಪ್ರೀತಿಯನ್ನೂ, ಮನುಷ್ಯ ಪ್ರೀತಿಯನ್ನೂ ಸದಾ ಎಚ್ಚರಿಸುತ್ತಲೇ ಬಂದಿದೆ. ಜೊತೆಗೆ ಹೊರಗಿನ ತಲ್ಲಣಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ, ಪೂರ್ವಾಗ್ರಹಗಳಿಲ್ಲದೇ ಅರಿಯುವ, ಈ ನನ್ನ ಅಲ್ಪ ಅರಿವಿನಾಚೆಗೂ ಇರುವ ಬೆರಗಿಗೆ, ಶಕ್ತಿಗೆ, ಅನೂಹ್ಯ ಸೃಷ್ಟಿ ಸತ್ಯಗಳಿಗೆ ತಲೆಬಾಗುವ ವಿನಯವನ್ನೂ ಕವಿತೆ ನನಗೆ ಕಲಿಸಿದೆ"[೩].

**ಕೊನೆ ಟಿಪ್ಪಣಿಗಳು :**

೧. ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ (ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ ಭಾಗ-೩, ಆಶಯ ಲೇಖನ – ಡಾ॥ ವಿಜಯಾದಬ್ಬೆ, ಪುಟ ಸಂಖ್ಯೆ-೨, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨. ಜೇಡರ ದಾಸಿಮಯ್ಯನ ವಚನಗಳು, ಸಂಪಾದಕರು ಹೆಚ್. ದೇವೀರಪ್ಪ ಮತ್ತು ಆರ್. ರಾಜಪ್ಪ, ಪುಟ ಸಂಖ್ಯೆ-೩೬

೩. 'ಕಡಲಿಗೆಷ್ಟೊಂದು ಬಾಗಿಲು' ಕೃತಿಯ 'ಬಾಗಿಲು ತೆರೆದ ಮುನ್ನ' ಎಂಬ ಶೀರ್ಷಿಕೆಯಡಿ,- ರೂಪಹಾಸನ, ಪುಟ ಸಂಖ್ಯೆ-೨೧, ಲೋಹಿಯಾ ಪ್ರಕಾಶನ, ಬಳ್ಳಾರಿ-೨೦೧೦.

ಅಧ್ಯಾಯ – ೭

## ಫಲಿತಗಳು ಮತ್ತು ಸಾಧ್ಯತೆಗಳು

ಹೊಸ ಸಹಸ್ರಮಾನದಲ್ಲಿ ಕಳೆದ ಒಂದೂವರೆ ದಶಕದಿಂದ ಕಾವ್ಯ ಕೃಷಿಗೆ ತೊಡಗಿರುವ ರೂಪ ಹಾಸನ ಅವರು ಈವರೆಗೆ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಒಂದಿಷ್ಟು ಹಸಿಮಣ್ಣು', ೨೦೦೦, 'ಬಾಗಿಲಾಚೆಯ ಮೌನ', ೨೦೦೫, 'ಕಡಲಿಗೆಷ್ಟೊಂದು ಬಾಗಿಲು, ೨೦೧೦ ಈ ಮೂರು ಕೃತಿಗಳಲ್ಲಿ ಒಟ್ಟು ೧೨೮ ಕವಿತೆಗಳು ಸೇರಿಕೊಂಡಿದೆ. ಇವುಗಳಲ್ಲದೆ ೨೦೧೦ರಲ್ಲಿ 'ಗಳಿಗೆಬಟ್ಟಲು ತಿರುವುಗಳಲ್ಲಿ' ಎಂಬ ಕಿರುಪದ್ಯಗಳು ಸಂಕಲನವೊಂದನ್ನು ಹೊರತರಲಾಗಿದೆ. ಇದರಲ್ಲಿ ಚುಟುಕುಗಳು ಅಥವಾ ಮುಕ್ತಕಗಳು ಎಂದು ಹೇಳಲಾಗುವ ೧೨೮ ಕಿರುಪದ್ಯಗಳಿವೆ. ಇಲ್ಲಿ ಬರುವ ಪದ್ಯಗಳನ್ನು 'ಹಸಿವು' ಮತ್ತು 'ರೊಟ್ಟಿ'ಯನ್ನು ರೂಪಕವಾಗಿಸಿಕೊಂಡು ಅವುಗಳ ಸುತ್ತ ಕಂಡುಬರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಆಯಾಮಗಳನ್ನು ಎಳೆ ಎಳೆಯಾಗಿ, ಅತ್ಯಂತ ಪರಿಣಾಮಕಾರಿಯಾಗಿ, ವಿಭಿನ್ನ ತಾತ್ವಿಕ ನೆಲೆಗಳಲ್ಲಿ ರಚಿಸಲಾಗಿದೆ. 'ಗಳಿಗೆ ಬಟ್ಟಲ ತಿರುವು'ಗಳಲ್ಲಿನ ಪದ್ಯಗಳನ್ನು ಓದಿದಷ್ಟು ಅರ್ಥ ಸಾಧ್ಯತೆಗಳು ವಿಸ್ತಾರಗೊಳ್ಳುತ್ತಾ ಹೋಗುತ್ತವೆ. ಇಲ್ಲಿನ ಅನೇಕ ಸಂಗತಿಗಳು ಕೃತಿಯ ವಸ್ತು ಜಾಲದಲ್ಲಿ ಸೇರಿಕೊಂಡು ಕೃತಿಯ ಮಹೋನ್ನತಿಯನ್ನು ಹೆಚ್ಚಿಸಿವೆ. ಇಲ್ಲಿ ಫಲಿತಗೊಂಡಿರುವ ವಿಚಾರಗಳಲ್ಲಿ ದ್ವೈತ – ಅದ್ವೈತ ತತ್ವಗಳು, ಆತ್ಮ – ಪರಮಾತ್ಮಗಳ ಪರಿಕಲ್ಪನೆಗಳು, ಅನುಭವ ಮತ್ತು ಅನುಭಾವದ ನೆಲೆಗಳು, ಅಮೂರ್ತ ಆಲೋಚನೆಗಳು ಮುಖ್ಯವಾಗಿ ಗೋಚರವಾಗುತ್ತವೆ. ಯಾವುದನ್ನು ಹೇಳಬೇಕಾದರೂ 'ಹಸಿವು' ಮತ್ತು 'ರೊಟ್ಟಿ'ಯನ್ನು ಪ್ರತಿಮಾತ್ಮಕವಾಗಿಸಿಕೊಂಡು ಪ್ರಚುರಪಡಿಸಿರುವುದು ಸಂಶೋಧನೆಯ ಸಂದರ್ಭದಲ್ಲಿ ಕಂಡುಕೊಂಡ ಸತ್ಯವಾಗಿದೆ.

'ಒಂದಿಷ್ಟು ಹಸಿಮಣ್ಣು', 'ಬಾಗಿಲಾಚೆಯ ಮೌನ', 'ಕಡಲಿಗೆಷ್ಟೊಂದು ಬಾಗಿಲು', ಕೃತಿಗಳಲ್ಲಿನ ಕವಿತೆಗಳು ಸ್ತ್ರೀ ಬದುಕಿನ ಅನನ್ಯತೆಯನ್ನು, ಅಂತರಾಳದ ಬೇಗುದಿಯನ್ನು ಕಟ್ಟಿಕೊಡುತ್ತಲೇ, ಸಾರ್ವತ್ರಿಕವಾದ ಜೀವನದೃಷ್ಟಿಯನ್ನು ಸೃಷ್ಟಿಯ ವೈಪರೀತ್ಯಗಳನ್ನು ಲಿಂಗಾಧಾರಿತವಾದ ಸಾಮಾಜಿಕ ಮತ್ತು ಧಾರ್ಮಿಕ ಪಲ್ಲಟಗಳನ್ನು ಮನಮುಟ್ಟುವಂತೆ ವಿವರಿಸುತ್ತದೆ. ಕವಿಯತ್ರಿಯವರು ಏನೇ ಹೇಳಿದರೂ ಪ್ರತಿಮೆ ಮತ್ತು ರೂಪಕಗಳ ಮುಖೇನ ಸಾದರಪಡಿಸುತ್ತಿರುವುದು ಕಾವ್ಯ ಶೈಲಿಯ ಒಂದು ವಿಶಿಷ್ಟ ವಿಧಾನವಾಗಿ ತೋರಿ ಬರುತ್ತದೆ. ಈ ಹಿಂದಿನ ತಲೆಮಾರಿನ ಮಹಿಳಾ ಲೇಖಕರು ವ್ಯಕ್ತಪಡಿಸಿದ ಅಥವಾ ಪ್ರತಿಪಾದಿಸಿದ ಸ್ತ್ರೀವಾದಿ ಪ್ರಜ್ಞೆಯನ್ನು ದಾಟಿ, ಉಗ್ರವಾದ ಮನೋಧೋರಣೆಯನ್ನು ಕೈಬಿಟ್ಟು, ವ್ಯವಸ್ಥೆಯ ನಡುವೆಯೇ ನಿಂತು, ಸ್ತ್ರೀ ಸಂವೇದನೆಗಳನ್ನು ಅವಳ ಜೀವನದ ಅಸ್ಮಿತೆಯನ್ನು ಹೊಸ ರೀತಿಯಲ್ಲಿ ಅಭಿವ್ಯಕ್ತಗೊಳಿಸಿರುವುದು ಕಂಡುಬರುತ್ತದೆ. ಲೇಖಕರು ಪ್ರತಿಮೆ ಮತ್ತು ರೂಪಕಗಳ ಆಯ್ಕೆಗಾಗಿ

ಮನದಾಳದ ಇಂಗಿತವನ್ನು ವ್ಯಕ್ತಪಡಿಸುವುದಕ್ಕಾಗಿ ಚಡಪಡಿಸುವುದಿಲ್ಲ; ಕವಿತೆ ಕಟ್ಟಲು ಕಸರತ್ತು ಮಾಡುವುದಿಲ್ಲ. ದೈನಂದಿನ ಜೀವನದ ಪರಿಕರಗಳೇ ಪ್ರತಿಮೆಗಳಾಗಿ ನಿಲ್ಲುತ್ತದೆ. ಅಡುಗೆ ಮನೆಯ ಸಾಮಾನ್ಯ ಪದಾರ್ಥಗಳೇ ರೂಪಕಗಳಾಗಿ ಮೈದಳೆಯುವ ಮುಖೇನ ಇಡೀ ಕಾವ್ಯಕ್ಕೆ ಅನನ್ಯ ಶೋಭೆಯನ್ನು ಉತ್ತಮ, ಸಾದೃಶ್ಯವನ್ನು, ಅರ್ಥಪೂರ್ಣವಾದ ವೈದೃಶ್ಯವನ್ನು ಕೊಡುತ್ತವೆ. ಈ ಹುಡುಕಾಟದಲ್ಲಿ ಕವಿಯ ಮನೋಧರ್ಮ ಸಹಜವಾಗಿದ್ದು, ಸ್ವಾಭಾವಿಕ ನೆಲೆಯಲ್ಲಿ ತೆರೆದುಕೊಳ್ಳುವ ಪರಿಯನ್ನು ಅಧ್ಯಯನದ ಸಂದರ್ಭದಲ್ಲಿ ಅನೇಕ ಕವಿತೆಗಳ ಉದಾಹರಣೆಯೊಂದಿಗೆ ವಿಮರ್ಶಿಸಲಾಗಿದೆ.

ರೂಪ ಹಾಸನ ಅವರ ಕಾವ್ಯ ರಚನೆ ಕಾರ್ಖಾನೆಯಲ್ಲಿ ತಯಾರಾಗುವ ಸರಕಿನಂತಲ್ಲ. ಸುದೀರ್ಘ ಕಾಲದವರೆಗೆ ಸುತ್ತಲ ಜಗತ್ತಿನ ನೂರಾರು ಸಂಗತಿಗಳನ್ನು ತಲಸ್ಪರ್ಶಿಯಾಗಿ ವೀಕ್ಷಿಸಿ, ತಮ್ಮೊಳಗೆ ಅಂತರ್ಗತ ಮಾಡಿಕೊಂಡು ಕವಿತೆ ಕಟ್ಟಿರುವುದು ನನಗೆ ತೋಚಿದ ಮುಖ್ಯ ಸಂಗತಿಯಾಗಿದೆ. ಇಲ್ಲಿ ಬರುವ ಒಂದೊಂದು ಕವಿತೆಯು ಹತ್ತಾರು ಅರ್ಥ ಸಾಧ್ಯತೆಗಳನ್ನು ನಮ್ಮ ಮುಂದೆ ತೆರೆದಿಡುತ್ತವೆ. ಇವರ ಕವಿತೆಗಳಲ್ಲಿ ಮಣ್ಣಿನ ವಾಸನೆ, ಅಡುಗೆ ಮನೆಯ ಪರಿಮಳ ಗಮಗಮಿಸುತ್ತದೆ. ಅಡುಗೆ ಮನೆ ಸಾಹಿತ್ಯಕ್ಕೆ ವಿಭಿನ್ನ ಆಯಾಮ ಕೊಟ್ಟಿರುವುದನ್ನು ಇಲ್ಲಿ ಪರಿಶೀಲಿಸಲಾಗಿದೆ. ಬಾಗಿಲನ್ನು ದಾಟಿ, ಕತ್ತಲೆಯಿಂದ ಹೊರಬಂದು; ಬೆಳಕನ್ನು ತಬ್ಬುವ ಅಭೀಪ್ಸೆಯನ್ನು ಇವರ ಕಾವ್ಯ ಅತ್ಯಂತ ಉತ್ಕಟವಾಗಿ ಪ್ರಕಟಿಸುತ್ತದೆ. 'ಒಂದಿಷ್ಟು ಹಸಿಮಣ್ಣು' ಕೃತಿಯು ಲೇಖಕರಿಗೆ ಬಹುಜನಪ್ರಿಯತೆಯನ್ನು ತಂದುಕೊಟ್ಟ ಸಂಕಲನವಾಗಿದೆ. ಬಹಳಷ್ಟು ಮಹಿಳಾ ಲೇಖಕರಲ್ಲಿ ಆತ್ಮಶೋಧನೆಯಂತಹ ವಿಚಾರಗಳು ಈ ಕೃತಿಯ ಉದ್ದಗಲಕ್ಕೂ ವ್ಯಾಪಿಸಿಕೊಂಡಿದೆ. ತನ್ನ ಆರೋಗ್ಯಕರವಾದ ನಿಲುವುಗಳಿಂದಲೇ ರೂಪಾ ಅವರು ಮಹಿಳಾ ಕಾವ್ಯಕ್ಕೆ ಬೇರೆ ಆಯಾಮವನ್ನು ಒದಗಿಸಲು ಪ್ರಯತ್ನಿಸಿದ್ದಾರೆ. ಸ್ತ್ರೀ ಬರವಣಿಗೆ ಎಂದ ಕೂಡಲೇ ಪುರುಷನ ವಿರುದ್ಧ ಬರೆಯಲೇಬೇಕೆಂಬ ಹಠಮಾರಿತನವನ್ನು ಕೈಬಿಟ್ಟು, ಅವನ ದೌರ್ಬಲ್ಯಗಳ ಬಗ್ಗೆ ತಿಳಿ ಹೇಳುವ ವೈಖರಿ ಕಂಡುಬರುತ್ತದೆ. ಉದಾಹರಣೆಗೆ "ತಿರುಳು ಬಿಟ್ಟು ಕರಟ ಕೆರೆವ, ನಿನ್ನ ಈ ಪರಿಗೆ ನಗಲೇ? ಅಳಲೇ?"[೧] (ರಸಿಕ ಕವಿಗೆ), ಎನ್ನುವಲ್ಲಿ ವ್ಯಂಗ್ಯವಿದೆ. ಸ್ತ್ರೀಯನ್ನು ಅರ್ಥಮಾಡಿಕೊಳ್ಳದ ಪುರುಷನ ಮನೋಧೋರಣೆ ಬಗ್ಗೆ ವಿಶಾದವಿದೆ; ಮಾತ್ರವಲ್ಲ, ತೀರಾ ಸೌಮ್ಯವಾದ ನೆಲೆಯಲ್ಲೇ ಪುರುಷ ಕೇಂದ್ರಿತ ಸಮಾಜವನ್ನು ಲೇವಡಿ ಮಾಡುವ ಪರಿ ಗಮನಾರ್ಹವಾಗಿದೆ. ಪರಂಪರಾಗತವಾದ ಮೌಲ್ಯಗಳನ್ನು ವಿಭಿನ್ನ ಆಯಾಮಗಳಲ್ಲಿ ಸಂಕೇತಗಳ ಮೂಲಕ ಮೈಚಳಿ ಬಿಟ್ಟು ಅತ್ಯಂತ ಪ್ರೀತಿಯಿಂದ ಹಾಗೂ ಆತ್ಮಸ್ಥೈರ್ಯದಿಂದ ಪ್ರಶ್ನಿಸುವ ಮನೋಧೋರಣೆಯನ್ನು ಇಲ್ಲಿನ ಕವಿತೆಗಳಲ್ಲಿ ಪ್ರಕಟಿಸಲಾಗಿದೆ. ಒಟ್ಟಾರೆ 'ಒಂದಿಷ್ಟು ಹಸಿಮಣ್ಣು' ಕೃತಿಯು ಲೇಖಕರ ಮನದಾಳದಲ್ಲಿ ಅಡಗಿಕೊಂಡಿದ್ದ ಹೊಸ ತಲೆಮಾರಿನ ಕವಿಯತ್ರಿಯನ್ನು ಪರಿಚಯಿಸಿದೆ. ಪ್ರೊ. ವಿಜಯಲಕ್ಷ್ಮಿ ಹಾಸನ ಅವರ ಮಾತುಗಳಲ್ಲಿ ಹೇಳುವುದಾದರೆ "ಇಲ್ಲಿ ಹಂಬಲವಿದೆ, ಬದಲಾಗುತ್ತಾ ಬೆಳೆಯುವ ತುಡಿತವಿದೆ, ಕೈಚಾಚಿ ಮುಗಿಲನ್ನೇ ಹಿಡಿವ ಬಯಕೆಯಿದೆ. ಆ ಬಯಕೆಗಿರುವ ಕಡಿವಾಣದ ಅರಿವಿದೆ, ಮುಗಿಲ ಮುಟ್ಟುವ ತವಕವಿದ್ದರೂ ನೆಲ ಬಿಡದ ಹಂಬಲವಿದೆ.

ಅದಕ್ಕೆ ಬೇಕಿರುವುದು ಒಂದಿಷ್ಟು ಹಸಿಮಣ್ಣು. ಈ ನೆಲದ ಹಂಬಲ ಅವರಿಗೆಷ್ಟು ತೀವ್ರವಾಗಿದೆಯೆಂದರೆ ಬೇರೂರಲು ಬೇಕಿರುವುದು ಒಂದಿನಿಸೇ ಜಾಗವಾದರೂ ಸರಿ ಕುಂಡಗಳಲ್ಲಿ ಬೆಳೆಯುವ ಬೋನ್ಸಾಯ್ ಆಗುವುದು ಅವರಿಗೆ ಬೇಕಿಲ್ಲ".[೨]

'ಬಾಗಿಲಾಚೆಯ ಮೌನ' ಕೃತಿಯನ್ನು ಅಧ್ಯಯನಕ್ಕೊಳಪಡಿಸಿದಾಗ ಲೇಖಕರ ಕಾವ್ಯ ರಚನೆಯಲ್ಲಿನ ಪ್ರಬುದ್ಧತೆ ಮತ್ತಷ್ಟು ಹದಗೊಂಡು ಪ್ರಕಟವಾಗಿರುವುದು ಗೊತ್ತಾಗುತ್ತದೆ. ಇಲ್ಲಿನ ಕವಿತೆಗಳಲ್ಲಿ ಕವಯತ್ರಿ ಅವರ ಪ್ರತಿಭಾ ಕಾರಂಜಿ ಉಜ್ವಲವಾಗಿ ಅನಾವರಣಗೊಂಡಿದೆ. ಕೃತಿಯ ಫಲಿತಗಳನ್ನು ನಿಚ್ಚಳವಾಗಿ ದಾಖಲಿಸುವುದಾದರೆ 'ಹೊಸ್ತಿಲಿನಲ್ಲಿ ಕವಿತೆ', 'ಕವನ ಹುಟ್ಟಿತು ಕೇಳಾ', 'ನನ್ನ ಹಾಡಿಗೆ' ಎಂಬ ಕವನಗಳಲ್ಲಿ ಕಾವ್ಯ ಹುಟ್ಟುವ ಬಗೆಯನ್ನು, ಕವಿತೆಯ ಚಿಂತನೆಗಳನ್ನು ಗುರುತಿಸಲಾಗಿದೆ. ಇಲ್ಲಿನ ಅನೇಕ ಕವಿತೆಗಳು ಅಂತರಂಗದ ಬೆಳಗನ್ನು ಬದಿಗೊತ್ತಿ, ಬಾಹ್ಯ ಜಗತ್ತಿನ ಆಡಂಬರದಲ್ಲಿ ಮುಳುಗಿರುವ ನಮ್ಮ ಚಿಂತಾಜನಕ ಸ್ಥಿತಿಯನ್ನು ವಿವರಿಸುತ್ತದೆ. ರೂಪರವರು ಮನೆಯ ಒಳಗಿನ ಬೆಳಕಿನಲ್ಲಿ ಮೀಯಬೇಕೋ? ಅಥವಾ ರೂಪ ಪ್ರಪಂಚದ ಥಳುಕಿನಲ್ಲಿ ಮೈಮರೆಯಬೇಕೋ? ಎಂಬಿತ್ಯಾದಿ ತಾಕಲಾಟಗಳನ್ನು, ಸಂಘರ್ಷವನ್ನು ತಾತ್ವಿಕ ಚಿಂತನೆಗಳನ್ನು ಹೊರ ಹಾಕಿರುವುದು ವೇದ್ಯವಾಗುತ್ತದೆ. 'ವಿಸ್ಮಯ', 'ನಿರಂತರ', 'ಕಾರ್ಯಕಾರಣ', 'ಸಂಬಂಧ' ಎನ್ನುವ ಮೂರು ಕವಿತೆಗಳನ್ನು ಒಟ್ಟೊಟ್ಟಿಗೆ ಓದಿಕೊಂಡರೆ ಕವಿ ಮನಸ್ಸು ಮಾಗಿರುವ ರೀತಿಯನ್ನು ಅಧ್ಯಯನವು ಕಂಡುಕೊಂಡಿದೆ. ಕಾವು ಅಂದರೆ ವ್ಯವಸ್ಥೆ. ಚೀಕಲು ಸಾಸಿವೆಯಂತಹ ಮನಸ್ಸುಗಳನ್ನು, ಸದ್ದಿಲ್ಲದೇ ಉಕ್ಕುವ ಹಾಲಿನಂಥ ಉತ್ಸಾಹವನ್ನು, ಸುಡುವ ಮನಸ್ಥಿತಿಯ ಜನರನ್ನು ಮಾತನಾಡಿಸದೆಯೂ ಅರಿಯುವ ಸೂತ್ರವನ್ನು, ಹೇರಿಟ್ಟ ಕಲ್ಲಿನ ಭಾರಕ್ಕೆ ಮೊಳಕೆಯೊಡೆಯುವ ಬಟ್ಟೆಯಲ್ಲಿ ಕಟ್ಟಿಟ್ಟ ಕಾಳಿನಂಥ ಕನಸುಗಳನ್ನು, ಅಷ್ಟೇ ಏಕೆ, ಸಿಟ್ಟಿನ ಘಾಟು ಪುಟಿದೇಳುವ ಪರಿಯನ್ನು ಇನ್ನಿಲ್ಲದ ಹಾಗೆ ಅಭಿವ್ಯಕ್ತಗೊಂಡಿರುವುದನ್ನು ಈ ನಿಬಂಧದ ವಿವಿಧ ಅಧ್ಯಾಯಗಳಲ್ಲಿ ಕವಿತೆಗಳ ಉದಾಹರಣೆಗಳೊಂದಿಗೆ ಕೃತಿಸಲಾಗಿದೆ. ಅಂದರೆ, 'ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದರೂ; ಕವಿತೆ ಕಟ್ಟುವುದನ್ನು ಬಿಡಲು ಸಾಧ್ಯವಿಲ್ಲ' ಎಂಬ ಕವಿಯ ಭಾವತೀವ್ರತೆ ಈ ಮೇಲಿನ ಮಾತುಗಳಲ್ಲಿ ಫಲಿತಗೊಂಡಿದೆ. 'ಬಾಗಿಲಾಚೆಯ ಮೌನ' ಕೃತಿಯನ್ನು ವಿಮರ್ಶಿಸುತ್ತಾ ಡಿ.ಎಸ್. ರಾಮಸ್ವಾಮಿ ಇವರು "ಬಾಗಿಲಾಚೆಯ ಮೌನದ ಹಲವು ಧ್ಯಾನಸ್ಥ ಸ್ಥಿತಿಗಳಿಂದ ಮನಸ್ಸು ಸುತ್ತಣ ಪ್ರಪಂಚವನ್ನು, ಅದರ ಸೆಳೆತವನ್ನು ಧಿಕ್ಕರಿಸಿ ಬೆಳೆಯುವ ಬಯಕೆಯನ್ನು ದಾಖಲಿಸುತ್ತವೆ"[೩] ಎಂದಿದ್ದಾರೆ.

'ಕಡಲಿಗೆಷ್ಟೊಂದು ಬಾಗಿಲು' ಕೃತಿಯು ಅಸಮ ಪುರಾಣಗಳ ಕಟ್ಟುಕಥೆಗಳನ್ನು, ಹೆಣ್ಣಿನ ಸುತ್ತ ಹಾಕಲಾಗಿರುವ ಗೊಡ್ಡು ಸಂಪ್ರದಾಯಗಳ ಬೇಲಿಯನ್ನು ನಿರ್ದಾಕ್ಷಿಣ್ಯವಾಗಿ ಸೀಳುವ, ಒಡೆಯುವ ಪ್ರಯತ್ನವನ್ನು ಮಾಡಿರುವುದು ಅಧ್ಯಯನ ಕಂಡುಕೊಂಡ ಫಲಶೃತಿಯಾಗಿದೆ. 'ಕಡಲಿಗೆಷ್ಟೊಂದು ಬಾಗಿಲು' ಎಂಬ ಹೆಸರೇ ಅಭಿವ್ಯಕ್ತಿಯ ಅನಂತ ಸಾಧ್ಯತೆಗಳನ್ನು ಪ್ರಚುರಪಡಿಸುತ್ತದೆ. ಈ ಕೃತಿಯ ಅನೇಕ ಕವಿತೆಗಳು ಪ್ರಸ್ತುತ ಸನ್ನಿವೇಶದ ಸಾಮಾಜಿಕ ಆಯಾಮಗಳನ್ನು ಬಿಚ್ಚಿಡುತ್ತವೆ. ಹಿಂಸಾತ್ಮಕ ರೀತಿಯಲ್ಲಿ ಚರಿತ್ರೆಯನ್ನು

ಕಟ್ಟುವುದಕ್ಕೆ, ಇತಿಹಾಸದಲ್ಲಿ ದಾಖಲಾಗುವುದಕ್ಕೆ, ಲೇಖಕರ ಅಭಿಮತವಿಲ್ಲ. 'ನಾವು ಅವರಂತಲ್ಲ' ಕವಿತೆಯ ಮುಖೇನ, ಸದಾ ವರ್ತಮಾನದಲ್ಲಿದ್ದು ಬದುಕು ಕಟ್ಟಿಕೊಳ್ಳುವ ಆತ್ಮವಿಶ್ವಾಸವನ್ನು ವ್ಯಕ್ತಪಡಿಸಿರುವುದು ವೇದ್ಯವಾಗುತ್ತದೆ. ರೂಪರವರು ತಮ್ಮ ಕವಿತೆಗಳ ಮೂಲಕ ನೋವುಣ್ಣುತ್ತಿರುವ ಹೆಣ್ಣಿನ ಹೃದಯದ ಬಾಗಿಲು ತೆಗೆದು ತೋರಿಸುತ್ತಾ ಅವರಿಗೆಲ್ಲಾ 'ತಮ್ಮಲ್ಲಿರುವ ಹೊಸ ಪಟ್ಟುಗಳ' ಅರಿವು ಮೂಡಿಸಿ 'ಬಳ್ಳಿಗೆ ಮರವೇ ಆಸರೆಯಾಗಬೇಕೆ?' ಎಂಬ ಧೈರ್ಯ ತುಂಬುವ ಪ್ರಯತ್ನದೊಂದಿಗೆ ಸ್ತ್ರೀ ವಿಮೋಚನೆಯ ಸೂತ್ರಗಳನ್ನು ನೀಡಿದ್ದಾರೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಗೆ ಸವಾಲಾಗುವ 'ರೂಪ ರೂಪಗಳನು ದಾಟಿ', 'ನಿರಾಕಾರಣ', 'ಹೂ ಬೆಂಕಿ', 'ಜೋಕರು', 'ಪ್ರತಿಫಲ' ಮೊದಲಾದ ಕವಿತೆಗಳ ಸಾಮಾಜಿಕ ಬದಲಾವಣೆಯನ್ನು ಬಯಸುತ್ತವೆ. ಹೆಣ್ಣಿನ ಬದುಕಿಗೆ ಸಮೀಪವಾದ ಮಸಿ ಬಟ್ಟೆ, ಕುಂಟೋಬಿಲ್ಲೆ ಆಟ, ಬೆಣ್ಣೆ – ತುಪ್ಪ, ಭತ್ತ – ಅಕ್ಕಿ, ಒಗ್ಗರಣೆ ಮೊದಲಾದವು ಪ್ರತಿಮೆಗಳಾಗಿ ಕವಿತೆಗಳ ಗಟ್ಟಿತನಕ್ಕೆ ಪೂರಕವಾಗುತ್ತವೆ. ರೂಪ ಹಾಸನ ಅವರ ಕವಿತೆಗಳೆಲ್ಲಾ ಕಡಲೊಳಗಿನ ಬಾಗಿಲುಗಳೇ ಆಗಿರುವುದರಿಂದ ಆಳಕ್ಕಿಳಿದು ಬಾಗಿಲುಗಳನ್ನು ತೆರೆದು ನೋಡುವ ತಾಳ್ಮೆ ಧೈರ್ಯಗಳೆರಡೂ ಸಹೃದಯರಿಗೆ ಅವಶ್ಯಕ.

## ೭.೧ ಸಮಾರೋಪ

ಒಟ್ಟಾರೆ ಕ್ರೋಢೀಕರಿಸಿ ಹೇಳುವುದಾದರೆ, ರೂಪ ಹಾಸನ ಅವರ ಕಾವ್ಯ ಚಿರಂತನವಾಗಿದ್ದು, ಸ್ತ್ರೀ ಬದುಕಿನ ಆಳ ಅಗಲಗಳನ್ನು ಕಟ್ಟಿಕೊಡುವಲ್ಲಿ ಇಲ್ಲಿನ ಕವಿತೆಗಳು ತುಡಿಯುತ್ತವೆ. ಕೇವಲ ಮಹಿಳೆಯ ಅಂತರಂಗದ ಅನನ್ಯತೆಯನ್ನು ಅನಾವರಣಗೊಳಿಸದೇ, ಸ್ತ್ರೀವಾದಿ ಪ್ರಜ್ಞೆಯು ಮೈಗೂಡಿಸಿಕೊಳ್ಳಬೇಕಾದ ಪ್ರಗತಿಪರ ಧೋರಣೆಗಳನ್ನು ಆರೋಗ್ಯಕರವಾದ ನಿಲುವುಗಳನ್ನು ಸೂಚಿಸಲಾಗಿದೆ. ಪುರುಷ ಕೇಂದ್ರಿತ ವ್ಯವಸ್ಥೆಯ ಎದುರು ಸಂಘರ್ಷಕ್ಕೆ ಇಳಿಯುವ ಬದಲು ಪುರುಷ ನಿರ್ಮಿತವಾದ ಸಮಾಜ ಮತ್ತು ಸಂಸ್ಕೃತಿಯೊಳಗಿನ ಕೆಡುಕುಗಳನ್ನು, ದೌರ್ಬಲ್ಯಗಳನ್ನು ತಿಳಿಹೇಳುವ ಮುಖೇನ 'ಈರ್ವರ ಸಂಯೋಗದಿಂದ ಮಾತ್ರ ಸಮಸಂಸ್ಕೃತಿ ನಿರ್ಮಾಣ ಸಾಧ್ಯ' ಎನ್ನುವುದು ಲೇಖಕರ ಅಭಿಪ್ರಾಯವಾಗಿದೆ. ಇಲ್ಲಿನ ಕವಿತೆಗಳ ಅರ್ಥಪ್ರಪಂಚವನ್ನು ಅವುಗಳ ತಾತ್ಪರ್ಯವನ್ನು, ಸಾರ್ವತ್ರಿಕವಾದ ಮೌಲ್ಯಗಳನ್ನು, ಈ ನಿಬಂಧವು ಸಾಕಷ್ಟು ಜೊತೆಗೊಳಪಡಿಸಿದೆ. ಆದರೂ ಸೃಜನಶೀಲತೆ ಎನ್ನುವುದು ಕಾಲದಿಂದ ಕಾಲಕ್ಕೆ ವಿಕಾಸಗೊಳ್ಳುತ್ತಾ ಹೋಗುವ ಒಂದು ಮನೋಧರ್ಮವಾಗಿದೆ. ರೂಪ ಅವರ ಕಾವ್ಯ ಬತ್ತಲಾರದ ಗಂಗೆಯಾಗಿದ್ದು, ಅವರು ಬಳಸಿರುವ ಪ್ರತಿಮೆ – ರೂಪಕಗಳನ್ನು ಕುರಿತಂತೆ ವಸ್ತು ವಿನ್ಯಾಸದ ಬಗ್ಗೆ ಸಂಶೋಧನೆ ಕೈಗೊಳ್ಳಲು ಇನ್ನೂ ಅನೇಕ ಸಾಧ್ಯತೆಗಳು ಇವರ ಕೃತಿಗಳಲ್ಲಿ ಹೇರಳವಾಗಿವೆ. ಹಿಂದಿನ ಮಹಿಳಾ ಕಾವ್ಯದ ಜಾಡನ್ನು ಅನುಸರಿಸದೇ ವಿಭಿನ್ನ ನೆಲೆಯಲ್ಲಿ ನಿಂತು ಸಾಹಿತ್ಯ ಕೃಷಿ ಮಾಡುತ್ತಿರುವ ರೂಪ ಅವರ ಸಮಗ್ರ ಜೀವನ ದೃಷ್ಟಿಯನ್ನು ಕುರಿತಂತೆ ಬೆಳಕು ಚೆಲ್ಲಬಹುದಾಗಿದೆ. ಇವರ 'ಗಳಿಗೆ ಬಟ್ಟಲ ತಿರುವುಗಳಲ್ಲಿ' ಕೃತಿಯಂತೂ ಅನಂತವಾದ ಅರ್ಥ ಸಾಧ್ಯತೆಗಳನ್ನು ಹೊಂದಿರುವ ಕಾರಣ ಮತ್ತೆ ಮತ್ತೆ ಶೋಧನೆಗೊಳಪಡಿಸಿಕೊಳ್ಳುವ ಮನೋಧರ್ಮ ಇಲ್ಲಿ ಕಂಡುಬರುತ್ತದೆ. ಪ್ರಸ್ತುತ ನಿಬಂಧವು ನಾಲ್ಕು ಕವನ ಸಂಕಲನಗಳಲ್ಲಿ ಹರಡಿಕೊಂಡಿರುವ ಅನೇಕ ಕವಿತೆಗಳನ್ನು ಮುಂದಿಟ್ಟುಕೊಂಡು ಲೇಖಕರ ಸಾಮಾಜಿಕ ಪ್ರಜ್ಞೆಯನ್ನು, ಸಾಂಸ್ಕೃತಿಕ ಅನನ್ಯತೆಯನ್ನು, ರೂಪಕ – ಪ್ರತಿಮೆಗಳ ಮೂಲಕ ಅಭಿವ್ಯಕ್ತಗೊಂಡಿರುವ ಸೃಜನಾತ್ಮಕವಾದ ವಿಭಿನ್ನ ಅರ್ಥಛಾಯೆಗಳನ್ನು ಬದುಕು ಮತ್ತು ಬರವಣಿಗೆಯ ನಡುವಿನ ಜೈವಿಕ ಸಂಬಂಧವನ್ನು ವಿಭಿನ್ನ ಆಯಾಮಗಳಲ್ಲಿ ಶೋಧಿಸಲಾಗಿದೆ, ವಿಮರ್ಶಿಸಲಾಗಿದೆ.

ಅಧ್ಯಯನದ ಸಂದರ್ಭದಲ್ಲಿ ಕಾವ್ಯದ ಮಹೋನ್ನತಿಯನ್ನು, ಬರವಣಿಗೆಯ ಸಿದ್ಧಿಯನ್ನು ಪ್ರಚುರ ಪಡಿಸುತ್ತಲೇ ಮಿತಿಗಳನ್ನು ಪ್ರಸ್ತಾಪಿಸುವುದು ಒಂದು ಸಾಂಪ್ರದಾಯಿಕ ವಿಧಾನವಾಗಿರುತ್ತದೆ. ಆದರೆ ತಪ್ಪು ಹುಡುಕುವುದು ವಿಮರ್ಶೆಯಲ್ಲ, ಸುಳ್ಳು ಹೇಳುವುದು ಸಂಶೋಧನೆಯಲ್ಲಿ ಅಪರಾಧವಾಗುತ್ತದೆ. ಅದಿರಿನ್ನು ಶೋಧಿಸಿ ಚಿನ್ನವನ್ನು ತೆಗೆದ ಹಾಗೆ ಕವಿಯ ಮನೋವ್ಯಾಪಾರಗಳನ್ನು ದಾಖಲಿಸಬೇಕಾಗುತ್ತದೆ. ಆದರೂ ರೂಪ ಹಾಸನ ಅವರ ಕಾವ್ಯ ಒಂದೇ ಓದಿಗೆ ನಮ್ಮ ಮನಸ್ಸನ್ನು ಮುಟ್ಟುತ್ತದೆ; ಎಂದು ಹೇಳಲು

ಬರುವುದಿಲ್ಲ. ಕಡಲಿನಷ್ಟು ವಿಸ್ತಾರವಾಗಿರುವ ಇವರ ಕಾವ್ಯದಲ್ಲಿ ಮಿಂದೇಳುವ ಕಡಲನ್ನು ಈಜುವ ಆತ್ಮಸ್ಥೈರ್ಯವನ್ನು ತೋರಿಸಬೇಕಾಗುತ್ತದೆ. ಇಲ್ಲಿ ಬಳಕೆಗೊಂಡಿರುವ ಪ್ರತಿಮೆ – ರೂಪಕಗಳು ಸುತ್ತಲ ಪರಿಸರದ ಪರಿಕರಗಳೇ ಆಗಿದ್ದರೂ; ಅವುಗಳು ಹೊರಡಿಸುವ ಅರ್ಥ ಮಾಧುರ್ಯವನ್ನು, ಭಾವ ತೀವ್ರತೆಯನ್ನು, ಕವಿಯ ಮಾನಸಿಕ ಒಳತೋಟಿಯನ್ನು ಗ್ರಹಿಸಬೇಕಾದರೆ ಸಹೃದಯನಾದವನಿಗೆ ಸೂಕ್ಷ್ಮ ಜ್ಞಾನ ಇರಬೇಕು. ಅಂದ ಮಾತ್ರಕ್ಕೆ ಇವರ ಕವಿತೆಗಳು ಕಬ್ಬಿಣದ ಕಡಲೆಯಲ್ಲ. ಸ್ಫೂರ್ತಿಯ ಆವೇಗದಲ್ಲಿ ಕವಿ ಯಾವ ಶಿಖರವನ್ನು ಮುಟ್ಟಿರುತ್ತಾನೋ, ಆ ಶಿಖರದ ಬಳಿಗೆ ಸಾಮಾನ್ಯ ಓದುಗನನ್ನು ಕೊಂಡೊಯ್ಯುವ ಹೊಣೆಗಾರಿಕೆಯನ್ನು ಯಾವುದೇ ವಿಮರ್ಶೆಯಾಗಲೀ ಸಂಶೋಧನೆಯಾಗಲೀ ಮಾಡಬೇಕಾಗುತ್ತದೆ. ಒಟ್ಟಾರೆ, ರೂಪ ಹಾಸನ ಅವರ ಕಾವ್ಯ ಬುದ್ಧಿಗಮ್ಯತೆ, ಭಾವಗಮ್ಯತೆ, ಅನುಭವ ಗಮ್ಯತೆಗಳ ತ್ರಿವೇಣಿ ಸಂಗಮವಾಗಿದೆ.

**ಕೊನೆ ಟಿಪ್ಪಣಿಗಳು :**

೧. ಒಂದಿಷ್ಟು ಹಸಿಮಣ್ಣು, ರೂಪ ಹಾಸನ, ಪುಟ ಸಂಖ್ಯೆ – ೨೯, ಸಿರಿವರ ಪ್ರಕಾಶನ, ಬೆಂಗಳೂರು, ೨೦೦೦.

೨. ಪ್ರೊ. ವಿಜಯಲಕ್ಷ್ಮಿ ಹಾಸನ, ಹಾಸನ ಆಕಾಶವಾಣಿಯ ಪುಸ್ತಕ ಪ್ರಕಟಣೆಯ ವಿಭಾಗದಿಂದ ('ಬಾಗಿಲಾಚೆಯ ಮೌನ', ಪುಟ ಸಂಖ್ಯೆ – ೭೫ರಲ್ಲಿ ಇವರ ಅಭಿಪ್ರಾಯವು ದಾಖಲೆಗೊಂಡಿದೆ).

೩. ಡಿ.ಎಸ್. ರಾಮಸ್ವಾಮಿ, ಅರಸೀಕೆರೆ ಇವರು ದಿನಾಂಕ ೧೫.೦೫.೨೦೦೫ ರಂದು ಜನತಾ ಮಾಧ್ಯಮ ಪತ್ರಿಕೆಯ ವಿಮರ್ಶಾ ವಿಭಾಗದಿಂದ ಪ್ರಕಟಗೊಂಡಿರುತ್ತದೆ. (ಬಾಗಿಲಾಚೆಯ ಮೌನ ಕೃತಿಯನ್ನು ಕುರಿತಂತೆ)

# ಅನುಬಂಧ

## ೧.೧ ರೂಪ ಹಾಸನ ಅವರ ಸಂಕ್ಷಿಪ್ತ ಪರಿಚಯ

| | | |
|---|---|---|
| **ಹೆಸರು** | – | ರೂಪಹಾಸನ |
| **ಜನ್ಮದಿನಾಂಕ** | – | ೨೨-೦೨-೧೯೬೭ |
| **ಜನ್ಮಸ್ಥಳ** | – | ಮೈಸೂರು |
| **ವಿದ್ಯಾಭ್ಯಾಸ** | – | ಬಿ.ಕಾಂ |
| **ತಂದೆ** | – | ಡಾ.ಎಸ್.ಪ್ರಸನ್ನಕುಮಾರ್ |
| **ತಾಯಿ** | – | ಪಿ.ಹೇಮಲತ |
| **ಪತಿ** | – | ಶ್ರೀ ಎಚ್.ವಿ.ನಾಗಚಂದ್ರ ರಾಜ್ಯಸಹಕಾರಿ ಲೆಕ್ಕಪರಿಶೋಧಕರು, ಹಾಸನ. |
| **ಮಗ** | – | ಎಚ್.ಎನ್.ನಿಶಾಂತ್ (ಬಿ.ಇ.) |
| **ಪ್ರಸ್ತುತ ವಾಸ** | – | ಪ್ರೇರಣಾ, ಉತ್ತರ ಬಡಾವಣೆ, ಹಾಸನ-೫೭೩೨೦೧ |
| **ದೂರವಾಣಿ** | – | ೦೮೧೭೨-೨೬೩೮೮೧[ಮ]<br>೯೪೮೦೨೨೭೫೭೬[ಮೊ]<br>**rupahassan@gmail.com** |
| **ಪ್ರಕಟಿತ ಕೃತಿಗಳು** | – | ಒಂದಿಷ್ಟು ಹಸಿಮಣ್ಣು-೨೦೦೦ (ಕಾವ್ಯ)<br>ಬಾಗಿಲಾಚೆಯ ಮೌನ-೨೦೦೫ (ಕಾವ್ಯ)<br>ಲಹರಿ-೨೦೦೩ (ಅಂಕಣ ಬರೆಹ ಸಂಕಲನ)<br>ಹೇಮೆಯೊಡಲಲ್ಲಿ-೨೦೦೮ (ಪ್ರಜಾವಾಣಿ ಅಂಕಣ ಬರೆಹಗಳ ಸಂಕಲನ)<br>ಕಡಲಿಗೆಷ್ಟೊಂದು ಬಾಗಿಲು-೨೦೧೦ (ಕಾವ್ಯ) |

ಗಳಿಗೆ ಬಟ್ಟಲ ತಿರುವುಗಳಲ್ಲಿ–೨೦೧೦ (ಕಿರುಪದ್ಯಗಳ ಸಂಕಲನ)

ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು–೨೦೧೦ (ಹಂಪಿ.ವಿ.ವಿ. 'ಮಂಟಪ ಮಾಲೆ' ಸರಣಿ ಮಹಿಳೆ ಹಕ್ಕು ಆಧಾರಿತ ಅಭಿವೃದ್ಧಿ–೨೦೧೪ [ಅಚ್ಚಿನಲ್ಲಿ]

**ಕಾವ್ಯಕ್ಕೆ ಪ್ರಶಸ್ತಿಗಳು** – ೧] ಶಿವಮೊಗ್ಗ ಕರ್ನಾಟಕ ಸಂಘದ–ಡಾ.ಜಿ.ಎಸ್.ಶಿವರುದ್ರಪ್ಪ ಪ್ರಶಸ್ತಿ

೨] ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ–ಮಾತೃಶ್ರೀ ರತ್ನಮ್ಮ ಹೆಗ್ಗಡೆ ಪ್ರಶಸ್ತಿ [೩ ಕವನ ಸಂಕಲನಕ್ಕೆ]

೩] ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತಿನ –ನೀಲಗಂಗಾ ದತ್ತಿ ಪ್ರಶಸ್ತಿ

೪] ಹುನಗುಂದದ ಮೃತ್ಯುಂಜಯ ಪ್ರತಿಷ್ಠಾನದ–ಮೃತ್ಯುಂಜಯ ಸಾರಂಗಮಠ ಪ್ರಶಸ್ತಿ

೫] ಹರಿಹರ ಸಾಹಿತ್ಯ ಸಂಗಮದ –ಹರಿಹರಶ್ರೀ ಪ್ರಶಸ್ತಿ

೬] ಸೇಡಂನ ಮಾತೃಶ್ರೀ ಮಹಾದೇವಮ್ಮ ಪ್ರತಿಷ್ಠಾನದ–ಅಮ್ಮ ಪ್ರಶಸ್ತಿ

೭] ಡಿ.ವಿ.ಜಿ. ಸಾಹಿತ್ಯ ಸಾಂಸ್ಕೃತಿಕ ವೇದಿಕೆಯ–ಡಿ.ವಿ.ಜಿ ಸಾಹಿತ್ಯ ಪ್ರಶಸ್ತಿ

೮] ಗೊರೂರು ಪ್ರತಿಷ್ಠಾನದ–ಅತ್ತಿಮಬ್ಬೆ ಸಾಹಿತ್ಯ ಪ್ರಶಸ್ತಿ

೯] ಮುಂಬಯಿ ಜಗಜ್ಯೋತಿ ಕಲಾವೃಂದದ–ಸುಶೀಲಾ ಎಸ್.ಶೆಟ್ಟಿ ಸ್ಮಾರಕ ಕಾವ್ಯ ಪ್ರಶಸ್ತಿ

೧೦] ಬೆಂಗಳೂರಿನ ಕನ್ನಡ ಸಾಹಿತ್ಯ ಸಂವರ್ಧನ ಟ್ರಸ್ಟನ ಕಾವ್ಯಾನಂದ ಪ್ರಶಸ್ತಿ ಇತ್ಯಾದಿ............

**ಅಂಕಣ ಸಂಕಲನಕ್ಕೆ** – ಶಿವಮೊಗ್ಗ ಕರ್ನಾಟಕ ಸಂಘದ–ಡಾ ಹಾ.ಮಾ.ನಾ ಪ್ರಶಸ್ತಿ

**ಸಂಸ್ಥೆಗಳೊಂದಿಗೆ** – ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯೆ

ಹಾಸನ ಜಿಲ್ಲಾ ಲೇಖಕಿಯರ ಬಳಗದ ಮಾಜಿ ಅಧ್ಯಕ್ಷೆ,

ನಗರ ಕೇಂದ್ರ ಗ್ರಂಥಾಲಯ ಸಲಹಾ ಸಮಿತಿ ಮಾಜಿ ಸದಸ್ಯೆ,

ಸರ್ಕಾರಿ ಮಹಿಳಾ ಪದವಿ ಕಾಲೇಜು ಅಭಿವೃದ್ಧಿ ಮಂಡಲಿ ಮಾಜಿ ಸದಸ್ಯೆ,

ಕರ್ನಾಟಕ ಬಾಲ ವಿಕಾಸ ಅಕಾಡೆಮಿಯ ಮಾಜಿ ಸದಸ್ಯೆ.

ಹಾಸನ ಜಿಲ್ಲಾ ಗೈಡ್ಸ್ ಮಾಜಿ ಕೇಂದ್ರ ಸ್ಥಾನಿಕ ಆಯುಕ್ತರು.

ಹಾಸನದ 'ಜೀವನ ಧಾರ' ಕುಟುಂಬ ಸಲಹಾ ಕೇಂದ್ರದ ಆಪ್ತ ಸಲಹೆಗಾರರು.

ಹಾಸನದ ಸರ್ಕಾರಿ ಕಲಾ ಕಾಲೇಜಿನ 'ಲೈಂಗಿಕ ದೌರ್ಜನ್ಯ ತಡೆ ಸಮಿತಿ' ಸದಸ್ಯೆ.

ಭೂಮಿ ಬಳಗ ಕೇಂದ್ರ ಸಂಸ್ಥೆಯ ನಿರ್ದೇಶಕರಲ್ಲಿ ಒಬ್ಬರು.

ಕರ್ನಾಟಕ ಬಾಲನ್ಯಾಯ ಮಂಡಳಿಯ ಜಿಲ್ಲಾ ಮಟ್ಟದ ತನಿಖಾ ಸಮಿತಿ ಸದಸ್ಯೆ

ಮಕ್ಕಳ ಪ್ರಾಯೋಜಕತ್ವ ಮತ್ತು ಪೋಷಕತ್ವ ಅನುಮೋದನಾ ಸಮಿತಿ ಸದಸ್ಯೆ

ಹಾಸನದ ಎಸ್‌ಡಿಎಮ್ ಆಯುರ್ವೇದ ಕಾಲೇಜಿನ 'ಎತಿಕ್ಸ್ ಕಮಿಟಿ' ಸದಸ್ಯೆ. ಇತ್ಯಾದಿ.........

**"ಪ್ರೇರಣಾ ವಿಕಾಸ ವೇದಿಕೆ"** ಎಂಬ ಮಕ್ಕಳು ಹಾಗೂ ಯುವಜನ ಪರ ಸ್ವಯಂ ಸೇವಾ ಸಂಸ್ಥೆಯೊಂದನ್ನು ಹುಟ್ಟು ಹಾಕಿ ಅದರಿಂದ ನಿರಂತರವಾಗಿ ಅವರ ಮಾನಸಿಕ ಬೌದ್ಧಿಕ ವಿಕಾಸಕ್ಕಾಗಿ ಪ್ರಯೋಗಗಳನ್ನು ನಡೆಸುವುದರೊಂದಿಗೆ ಅವರಲ್ಲಿ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಕನ್ನಡದ ಕುರಿತು ಆಸಕ್ತಿ ಮೂಡಿಸಲು ಪ್ರಯತ್ನ ನಡೆಸಿದ್ದಾರೆ.

ಗ್ರಾಮೀಣ, ಹಾಗೂ ಅಂಗವಿಕಲ ಮಕ್ಕಳ ವ್ಯಕ್ತಿತ್ವ ವಿಕಸನಕ್ಕಾಗಿ ವಿಭಿನ್ನ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದಾರೆ. ಜಿಲ್ಲೆಯ ಎಲ್ಲ ಕಾಲೇಜುಗಳಲ್ಲಿ ಸಾಮಾಜಿಕ-ವೈಚಾರಿಕ ಜಾಗೃತಿಗಾಗಿ ಚರ್ಚೆ, ಸಂವಾದ, ಭಾಷಣ, ಕಾರ್ಯಗಾರ ನಡೆಸುತ್ತಿದ್ದಾರೆ. ಬರಹ ಮತ್ತು ಪತ್ರಿಕೋದ್ಯಮದ ಕುರಿತು ಆಸಕ್ತಿ ಮೂಡಿಸುತ್ತಿದ್ದಾರೆ. **'ಮಾನಸಿ'** ಎಂಬ ಮಹಿಳಾಪರ ಸಂಸ್ಥೆಯನ್ನು ಸಂಘಟಿಸಿ ಕ್ರಿಯಾಶೀಲರಾಗಿದ್ದಾರೆ.

| | | |
|---|---|---|
| **ಸಮಾಜಸೇವೆಗಾಗಿ** | – | ಸಮಾಜ ಕ್ಷೇತ್ರದಲ್ಲಿನ ಸೇವೆಯನ್ನು ಗುರುತಿಸಿ, ಧಾರವಾಡದ ಚಿಲಿಪಿಲಿ ಬಳಗ ೨೦೦೮ನೇ ಸಾಲಿನ 'ಶಿಕ್ಷಣ ಸಿರಿ' ಪ್ರಶಸ್ತಿಯನ್ನು,<br>ಬೆಂಗಳೂರಿನ ಎನ್.ಎಮ್.ಎಮ್.ಕೆ.ಆರ್.ವಿ. ಕಾಲೇಜಿನ 'ಶಾಶ್ವತಿ' ಪ್ರತಿಷ್ಠಾನವು ೨೦೦೯ ನೇ ಸಾಲಿನ 'ಕರ್ನಾಟಕ ಕಲ್ಪವಲ್ಲಿ' ಪ್ರಶಸ್ತಿ ನೀಡಿ ಗೌರವಿಸಿವೆ. |
| **ಇತರೆ** | – | ಇವರ ಹಲವು ಕವನಗಳು ಮಲಯಾಳಿ, ಇಂಗ್ಲೀಷ್, ಹಿಂದಿ, ತಮಿಳು, ತೆಲುಗು, ಮರಾಠಿ, ಉರ್ದು ದೇಶಿಭಾಷೆಗೆ ಅನುವಾದಗೊಳ್ಳುವುದರ ಜೊತೆಗೆ ಸ್ಪ್ಯಾನಿಷ್ ಹಾಗೂ ಡಚ್ ಭಾಷೆಗಳಿಗೆ ಅನುವಾದಗೊಂಡಿವೆ.<br>ಮಹಿಳೆ, ಮಕ್ಕಳು, ಪರಿಸರ ಹಾಗೂ ಸಾಮಾಜಿಕ ಕಾಳಜಿಯ ಹಲವು ವೈಚಾರಿಕ ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹಾಸನ ಆಕಾಶವಾಣಿಯಿಂದ ನಿಯಮಿತವಾಗಿ ಕಾರ್ಯಕ್ರಮಗಳು ಹಾಗೂ ಚಿಂತನಗಳು ಪ್ರಕಟವಾಗುತ್ತಿವೆ. ಹಲವಾರು ರಾಜ್ಯ ಮಟ್ಟದ ಕವಿಗೋಷ್ಠಿ ಹಾಗೂ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ಕೇರಳದ ಪ್ರಸಿದ್ಧ ತುಂಚನ್ ಉತ್ಸವ ದಕ್ಷಿಣ ಭಾರತೀಯ ವಿಚಾರಗೋಷ್ಠಿ, ಕೇಂದ್ರ ಸಾಹಿತ್ಯ ಅಕಾಡೆಮಿ, ರಾಜ್ಯ ಸಾಹಿತ್ಯ ಅಕಾಡೆಮಿ ಕವಿಗೋಷ್ಠಿ ವಿಚಾರಗೋಷ್ಠಿ, ೨೦೧೧ರ ವಿಶ್ವಕನ್ನಡ ಸಾಹಿತ್ಯ ಸಮ್ಮೇಳನ ಕವಿಗೋಷ್ಠಿ, ದಸರಾ, ಹಂಪಿ, ಹೊಯ್ಸಳ, ಚಾಲುಕ್ಯ, ನವರಸಪುರ ಉತ್ಸವಗಳ, ಆಳ್ವಾಸ್ ನುಡಿಸಿರಿಯ ಮತ್ತು ಬಹುಭಾಷಾ ಕವಿಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. |

## ೧.೨ ರೂಪ ಹಾಸನ ಅವರ ಸಂದರ್ಶನ

೧. **ನಿಮ್ಮ ಕಾವ್ಯ ರಚನೆಗೆ ಸ್ಫೂರ್ತಿ ಏನು?**

ನಾನು ಒಂಭತ್ತನೆಯ ತರಗತಿಯಲ್ಲಿ ಇದ್ದಾಗ ಕವಿತೆ ಬರೆದೆ. ಪುಟ್ಟ ನಾಯಿಮರಿಯೊಂದು ಕಾರಿನ ಕೆಳಗೆ ಸಿಕ್ಕು ಸತ್ತದ್ದನ್ನು ನೋಡಿ ಹಲವು ದಿನಗಳು ತಳಮಳಿಸಿದ ನಂತರ, ನನಗೆ ಅರಿವಿಲ್ಲದಂತೆ ಕವಿತೆಯೊಂದು ಹೊರ ಬಂದಿತ್ತು! ಹಾಗೆ ನನ್ನ ಕವಿತೆಗೆ ಸ್ಫೂರ್ತಿ ಎಂದರೆ ಬಹುಶಃ ನನ್ನ ಸುತ್ತಲ ಪ್ರಪಂಚದ ನೋವು, ಸಂಕಟ, ದಾರುಣತೆಗಳೇ....... ಯಾವುದೇ ವ್ಯಕ್ತಿ, ಸಾಹಿತಿ, ಸಾಹಿತ್ಯ ಕೃತಿ ಸ್ಫೂರ್ತಿಯಲ್ಲ.

೨. **ಕವಿತೆಗಳನ್ನೇ ಬರೆಯಲು ಏಕೆ ಆಯ್ಕೆ ಮಾಡಿಕೊಂಡಿರಿ?**

ಕವಿತೆ ನನ್ನ ಉದ್ದೇಶ ಪೂರ್ವಕ ಆಯ್ಕೆಯಲ್ಲ. ನನ್ನ ಕವಿತೆಯ ಆಯ್ಕೆ! ಅದು ತನ್ನಷ್ಟಕ್ಕೆ ನನಗೆ ಒಲಿದ ಮಾಧ್ಯಮ ನಂತರದಲ್ಲಿ ನಾನು ಉದ್ದೇಶಪಟ್ಟು ಆಯ್ದುಕೊಂಡಿದ್ದು ಸಾಮಾಜಿಕ ಸಮಸ್ಯೆಗಳನ್ನೊಳಗೊಂಡು ಬರೆಯುವ ಲೇಖನಗಳನ್ನು.

೩. **ಮಹಿಳಾ ನೆಲೆಗಳು/ಸ್ತ್ರೀವಾದದ ಬಗ್ಗೆ ನಿಮ್ಮ ನಿಲುವು?**

ನಾನು ಹೆಣ್ಣಾಗಿರುವುದರಿಂದಲೇ ನನ್ನ ಸಂವೇದಗಳು ಪುರುಷನಿಗಿಂತ ಭಿನ್ನವೂ ಅನನ್ಯವೂ ಆಗಿರುತ್ತದೆಂದು ಭಾವಿಸಿದ್ದೇನೆ. ಈ ಹೆಣ್ಣಿನ ಕಣ್ಣಿನಿಂದ ನಾನು ಪ್ರಪಂಚವನ್ನು ನೋಡುವಾಗ, ಅದು ಈ ಪುರುಷ ಪ್ರಪಂಚ ಬಯಸುವ, ನಿರೀಕ್ಷಿಸುವ ರೀತಿಯಲ್ಲಿ ಇಲ್ಲದಿರಬಹುದು. ಆಗ ಮಾತ್ರ ಈ ಮಹಿಳಾ ನೆಲೆ, ಸ್ತ್ರೀವಾದ ಎಂಬ ಪದಗಳು ಬಳಸಲ್ಪಡುತ್ತವೆ. ಹಾಗೆಂದು ಆ ದೃಷ್ಟಿಕೋನವನ್ನು ಸದಾ ಪ್ರತ್ಯೇಕವಾಗಿಯೇ ನೋಡಬೇಕಾಗಿಲ್ಲ. ಹೆಣ್ಣೂ ಕೂಡ ತನ್ನ ಸಮಾನಳು, ಅವಳ ಸಂವೇದನೆಗಳೂ ಕೂಡ ಮುಖ್ಯವಾಹಿನಿಯಲ್ಲಿ ಮಿಳಿತವಾಗಿ ಗುರುತಿಸಲ್ಪಡಬೇಕು ಎಂಬ ಅರಿವು ಮೂಡಿದಾಗ ಅದು ಹೆಣ್ಣು-ಗಂಡು ಎಂಬ ಮಿತಿಯನ್ನೂ ಮೀರಿ ಒಟ್ಟು 'ಮನುಷ್ಯ ಸಂವೇದನೆ'ಯ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಸ್ತ್ರೀವಾದದ ಎಂಬುದಕ್ಕಿಂಥಾ ಸ್ತ್ರೀ ಸಂವೇದನೆ ಹೆಣ್ಣಿನ ಐಡೆಂಟಿಟಿಯನ್ನು, ಸಹಜತೆಯನ್ನು ಗುರುತಿಸಲು ಸರಿಯಾದ ದೃಷ್ಟಿಕೋನವೆಂದು ಭಾವಿಸಿದ್ದೇನೆ.

೪. **ಕೋಮುವಾದದ ಬಗೆಗೆ ನಿಮ್ಮ ನಿಲುವೇನು?**

ಕೋಮುವಾದ ಅತ್ಯಂತ ಅಮಾನವೀಯವಾದ ಕ್ರೌರ್ಯ. ಅದಕ್ಕೆ ತಮ್ಮವರು ಪರರು ಎಂಬ ಯಾವ ವ್ಯತ್ಯಾಸವೂ ಇಲ್ಲ. ಹಿಂಸೆ, ರಕ್ತಪಾತವಷ್ಟೇ ಅದರ ಗುರಿ. ಕೋಮುವಾದಿಗಳಿಗೆ ಹೊರಗಿನಿಂದ ಬೇಕಾದ್ದನ್ನು ತುಂಬಿಸಿ, ವಿವೇಚನೆ ಇಲ್ಲದ ರೋಬೋಟ್‌ಗಳಂತೆ ಭಯೋತ್ಪಾದಕರನ್ನಾಗಿ ಅವರನ್ನು ತಯಾರು ಮಾಡಲಾಗುತ್ತಿದೆ. ಅಲ್ಲಿ ಸಂಬಂಧ, ಪ್ರೀತಿ, ಅಂತಃಕರಣ, ಮಾನವೀಯತೆಗಳಿಗೆ ಯಾವ ಅರ್ಥವೂ ಇಲ್ಲ. ವಿನಾಕಾರಣದ ದ್ವೇಷ ಸಾಧನೆಯೊಂದೇ ಮುಖ್ಯವಷ್ಟೇ. ಕೋಮುವಾದದ ಹೆಸರಿನಲ್ಲಿ ಪ್ರಪಂಚದಾದ್ಯಂತ ಲಕ್ಷಾಂತರ ಜನ ಬಲಿಯಾಗುತ್ತಿರುವುದು ಮನುಕುಲಕ್ಕೆ ಕಳಂಕ ತರುವಂತದ್ದಾಗಿದೆ.

೫. **ಮತೀಯ/ಬಲಪಂಥೀಯವಾದದ ಬಗ್ಗೆ ನಿಮ್ಮ ನಿಲುವೇನು?**

ಯಾವುದೇ ಧರ್ಮ, ಮತ ಅಥವಾ ಸಿದ್ಧಾಂತದ ಹೆಸರಿನಲ್ಲಿ. ಯಾವುದೇ ಒಂದು ಜೀವಿಯನ್ನಾದರೂ ಮಾನಸಿಕವಾಗಿ ಅಥವಾ ದೈಹಿಕವಾಗಿ ಹಿಂಸಿಸಲು, ಶೋಷಿಸಲು ಸಾಧ್ಯವಾಗುವಂತಹ, ಯಥಾಸ್ಥಿತಿವಾದವನ್ನು ಪುಷ್ಟೀಕರಿಸುವ ಎಲ್ಲ ವಾದವೂ ನನಗೆ ಅಪಥ್ಯವೇ. ಎಲ್ಲ ಅತಿಗಳನ್ನು ಮೀರಿದ, ಬುದ್ಧ ಪ್ರತಿಪಾದಿಸುವ ಮಧ್ಯಮ ಮಾರ್ಗ ನಮ್ಮದಾಗಬೇಕು. ಅಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಗೌರವಿಸುತ್ತಲೇ ಸಮಷ್ಠಿ ಬದುಕಿನ ಹಿತ ಚಿಂತನೆಗೆ ದಾರಿಯಾಗಲು, ಒಳಿತಿನೆಡೆಗೆ ಸಾಗಲು ಸಾಧ್ಯವಿದೆ. ಎಲ್ಲ ಮತ ಧರ್ಮಗಳಿಗಿಂತಲೂ ಮನುಷ್ಯ ಧರ್ಮ ಮುಖ್ಯವೆನಿಸಿದಾಗ ಯಾವ ವಾದ, ಪಂಥ ಸಿದ್ಧಾಂತಗಳೂ ಅರ್ಥ ಕಳೆದುಕೊಳ್ಳುತ್ತವೆ. ಯಾವ ಧರ್ಮ ಹಾಗೂ ಮತವೂ ರಕ್ತಪಾತವನ್ನಾಗಲಿ, ಕೊಲೆಯನ್ನಾಗಲಿ, ಹಿಂಸೆಯನ್ನಾಗಲಿ ಬೋಧಿಸುವುದೂ ಇಲ್ಲ ಪ್ರಚೋದಿಸುವುದೂ ಇಲ್ಲ ಅಲ್ಲವೇ?

೬. **ಭಾರತೀಯ ಬದುಕಿನ ಗ್ರಾಮ-ನಗರಗಳ ಬಗ್ಗೆ ನಿಮ್ಮ ಪರಿಕಲ್ಪನೆ?**

ನಿಜವಾಗಿ ನೋಡಿದರೆ ನಮ್ಮದು ಗ್ರಾಮ ಭಾರತ. ಇಲ್ಲಿ ಆರು ಲಕ್ಷಕ್ಕೂ ಹೆಚ್ಚೂ ಹಳ್ಳಿಗಳಿವೆ. ಆದರೆ ದೂರದೃಷ್ಟಿ ಇಲ್ಲದ ನಮ್ಮ ರಾಜಕೀಯ ಧುರೀಣರ, ಆಡಳಿತಶಾಹಿಯ ಅಭಿವೃದ್ಧಿಯ ಪರಿಕಲ್ಪನೆ ಗ್ರಾಮಗಳ ವಿರೋಧಿಯಾಗಿದೆ. ಅದು ನಮ್ಮ ರಾಜಕೀಯ ಧುರೀಣರ, ಆಡಳಿತಶಾಹಿಯ ಅಭಿವೃದ್ಧಿಯ ಪರಿಕಲ್ಪನೆ ಗ್ರಾಮಗಳ ವಿರೋಧಿಯಾಗಿದೆ. ಅದು ಸ್ವಾತಂತ್ರ್ಯ ನಂತರದ ಈ ಅರವತ್ತು ವರ್ಷಗಳಲ್ಲಿ ನಗರಗಳನ್ನು ಸಿಂಗಪುರ ಮಾಡಲು, ಗ್ರಾಮಗಳನ್ನು ಕೊಳವೆ ಪ್ರದೇಶವನ್ನಾಗಿ ಮಾಡಲು ಹೊರಟಿದೆ. ನಮ್ಮ ಗ್ರಾಮಗಳು ಆಧುನಿಕತೆಯಿಂದ ಇನ್ನೂ

ಶತಮಾನದಷ್ಟು ದೂರವಿದೆ. ಅಸಮಾನ ಅಭಿವೃದ್ಧಿಯಿಂದಾಗಿ, ಇಂದಿಗೂ ಶೇಕಡಾ ೬೦ರಷ್ಟು ಹಳ್ಳಿಗಳಲ್ಲಿ ನೀರು, ವಿದ್ಯುತ್, ಶೌಚಾಲಯ, ರಸ್ತೆ, ಶೈಕ್ಷಣಿಕ ಹಾಗೂ ಆರೋಗ್ಯ ಸಂಬಂಧಿ ಮೂಲಭೂತ ಸೌಕರ್ಯಗಳು ಸಮರ್ಪಕವಾಗಿ ಅಶಾಂತ ಪರಿಸ್ಥಿತಿ ನಿರ್ಮಾಣವಾಗಿದೆ. ಇನ್ನೊಂದೆಡೆ ನಗರಗಳು ಅತೀ ಜನಸಂಖ್ಯೆಯಿಂದಾಗಿ ತುಂಬಿ ತುಳುಕುತ್ತಾ ಅಲ್ಲಿಯೂ ಬದುಕು ದುಸ್ಸಾಧ್ಯವಾಗಿದೆ. ಗಾಂಧೀಜಿ ಕಂಡ ಗ್ರಾಮ ಸ್ವರಾಜ್ಯದ, ಸ್ವಾವಲಂಬನೆಯ ಕಲ್ಪನೆಯಿಂದ ಮಾತ್ರ ಈ ಅಪಮಾನತೆಯನ್ನು ಸರಿಪಡಿಸಲು ಸಾಧ್ಯ. ಆದರೆ ಅಂತಹ ಯಾವ ಆಶಾವಾದವೂ ಪ್ರಸ್ತುತ ಸಂದರ್ಭದಲ್ಲಿ ಉಳಿದಿಲ್ಲವೆಂಬುದೇ ದುರಂತ.

೭. **ಸಾಮಾಜಿಕ ಸಾಂಸ್ಕೃತಿಕ ನೆಲೆಗಳಲ್ಲಿ ಜಾತಿ–ವರ್ಗ ಸಮಸ್ಯೆಗಳ ಬಗ್ಗೆ ನಿಮ್ಮ ಅಭಿಪ್ರಾಯ?**

ಇಂದು ಭಾರತೀಯ ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಜಾತಿಯ ಪ್ರಾಬಲ್ಯ ಮಿತಿಮೀರಿದೆ. ವರ್ಗ ಸಂಘರ್ಷವೂ ಅನಾದಿಯಿಂದ ಇದ್ದೇ ಇದೆ. ಸಂವಿಧಾನದ ಪ್ರಕಾರ ನಮ್ಮದು ಜಾತ್ಯತೀತ, ಪ್ರಜಾಪ್ರಭುತ್ವವಾದಿ ದೇಶ. ಆದರೆ ನಮ್ಮ ಸಾಮಾಜಿಕ ಕ್ಷೇತ್ರವನ್ನು ತಲೆತಲಾಂತರದಿಂದ ಹರಿದು ಬಂದ ಅಲಿಖಿತ ಸಂವಿಧಾನವೇ ಆಳುತ್ತಿದೆ. ಇಲ್ಲಿ ಪ್ರತಿ ಹಂತದಲ್ಲೂ ಜಾತಿ–ವರ್ಗವೇ ಕೆಲಸ ಮಾಡುತ್ತಿದೆ. ಅದು ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಗಳನ್ನು ಕ್ಯಾನ್ಸರಿನಂತೆ ವ್ಯಾಪಿಸಿದೆ. ನಿಜವಾಗಿ ನೋಡಿದರೆ ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಗತಿಪರ ವಿಚಾರವುಳ್ಳವರು ಇರುವುದರಿಂದ ಅಲ್ಲಿ ಜಾತಿ–ವರ್ಗಗಳ ಪ್ರಸ್ತಾಪವೇ ಆಗಬಾರದು. ಆದರೆ ಅಲ್ಲಿ ಇನ್ನೂ ಹೆಚ್ಚಿನ ಲೆಕ್ಕಾಚಾರಗಳು, ಒಳಸುಳಿಗಳು ಇವುಗಳನ್ನಾಧರಿಸಿಯೇ ನಡೆಯುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ.

೮. **ಕೌಟುಂಬಿಕ ಬದುಕಿನ ಚಿತ್ರಣಗಳು ಹೇಗಿರಬೇಕು ಎಂದುಕೊಳ್ಳುತ್ತೀರಿ?**

ಕುಟುಂಬವ್ಯವಸ್ಥೆ ಸಮಾನತೆಯ ಆಧಾರದಲ್ಲಿ ರೂಪುಗೊಳ್ಳಬೇಕು ಒಮ್ಮೆ ಯುವಜನರೊಂದಿಗಿನ ಸಂವಾದವೊಂದರಲ್ಲಿ, 'ಹಳ್ಳಿಗಾಡಿನ ಹೆಣ್ಣುಮಕ್ಕಳು ದಿನಗಟ್ಟಲೆ ಮೈಲಿಗಟ್ಟಲೆ ನಡೆದು ನೀರು ಮತ್ತು ಉರುವಲನ್ನು ಸಂಗ್ರಹಿಸಬೇಕಾದ ಪರಿಸ್ಥಿತಿ ಇದೆ. ಆ ಸಂದರ್ಭದಲ್ಲಿ ವ್ಯರ್ಥವಾಗುವ ಅವರ ಪ್ರತಿಭೆ, ಕೌಶಲ್ಯ, ವಿದ್ಯೆ, ಕಲಿಯಬಹುದಾದಂತಹ ಸಾಧ್ಯತೆ ಇವುಗಳನ್ನೆಲ್ಲಾ ಎಲ್ಲಿ ಹೇಗೆ ತುಂಬಿಕೊಳ್ಳುವುದು' ಎಂದು ಹೇಳಿದಾಗ, 'ಆ ಕೆಲಸವನ್ನೆಲ್ಲಾ ಮಾಡಲೇ ಅಲ್ಲವೇ ಮೇಡಂ ಹೆಣ್ಣುಮಕ್ಕಳಿರೋದು? ಎಂದು ಯುವಕನೊಬ್ಬ ಪ್ರಶ್ನಿಸಿದ್ದ. ಇದು ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿರುವ ಮೈಂಡ್ ಸೆಟ್ ಈ ಮೈಂಡ್‌ಸೆಟ್ ಅನ್ನು ಬದಲಾಯಿಸಿದರೆ ಮಾತ್ರ ನಮ್ಮ ಕುಟುಂಬಗಳು ಉಳಿಯಲು ಸಾಧ್ಯ. ಎಲ್ಲ ಜವಾಬ್ದಾರಿ, ಕೆಲಸಗಳನ್ನೂ ಸಮಾನವಾಗಿ ಹಂಚಿಕೊಂಡು ಮಾಡಿದಾಗ ಮಾತ್ರ ಹೆಣ್ಣಿನ ವಿದ್ಯೆ ಹಾಗೂ

ಆರ್ಥಿಕ ಸಬಲೀಕರಣಕ್ಕೆ ಅರ್ಥ ಬರುತ್ತದೆ. ಇಲ್ಲದಿದ್ದರೆ ಒಳಗೂ ಹೊರಗೂ ದುಡಿಯುವ ಜವಾಬ್ದಾರಿಯಿಂದ ಕಂಗೆಟ್ಟ ಹೆಣ್ಣು ಗುಲಾಮಳಾಗಿ ಮಾತ್ರ ಉಳಿಯಬೇಕಾಗುತ್ತದೆ. ಇದೇ ಕಾರಣಕ್ಕೆ ಸಂಘರ್ಷಗಳು ಉಂಟಾದರೆ ಮಕ್ಕಳು ಹಾಗೂ ಕುಟುಂಬದ ವೃದ್ಧರ ಮೇಲೆ ಇದು ಪ್ರತಿಕೂಲ ಪರಿಣಾಮ ಬೀರುತ್ತದೆ. ಈಗಾಗಲೇ ಇಂತಹ ಸಂದರ್ಭ ಸೃಷ್ಟಿಯಾಗಿದ್ದು ಇದು ಅತಿರೇಕಕ್ಕೆ ಹೋಗದಂತೆ ಎಚ್ಚರವಹಿಸಬೇಕಾಗಿದೆ. ಒಂದೆಡೆ ನೆಲೆ ನಿಲ್ಲಬೇಕಾದಂತಹ ಸಂದರ್ಭ ಬಂದಾಗ ಕುಟುಂಬ ವ್ಯವಸ್ಥೆಯನ್ನು ಸೃಷ್ಟಿಸಿದ್ದೇ ಹೆಣ್ಣು. ಆದರೆ ಈಗ ಅದೇ ಅವಳ ಸಮಾನತೆ ಹಾಗೂ ಸ್ವಾತಂತ್ರ್ಯದ ಕನಸಿಗೆ ಅಡ್ಡಿಯಾಗಿ ಉಸಿರು ಕಟ್ಟಿಸಿದಂತಾಗುತ್ತಿರುವಾಗ, ಸಹಜವಾಗಿ ಅದರಿಂದ ಬಿಡುಗಡೆಯನ್ನು ಪಡೆಯಲು ಬಯಸುತ್ತಿದ್ದಾಳೆ. ಎಲ್ಲೋ ಹುಟ್ಟಿ ಬೆಳೆದು, ಅಲ್ಲಿಂದ ತಾಯಿ ಬೇರನ್ನೇ ಕಿತ್ತುಕೊಂಡು ಮತ್ತೆಲ್ಲೋ ಕಸಿಯಾಗುವ ಗಿಡದಂತೆ ಸಂಪೂರ್ಣ ತನ್ನ ಅಸ್ತಿತ್ವ ಮರೆತು, ಮದುವೆಯಾದ ನಂತರ ಬೇರೆಯದೇ ವಾತಾವರಣಕ್ಕೆ ಹೊಂದಿಕೊಂಡು ಕುಟುಂಬದ ಎಲ್ಲರ ಮರ್ಜಿಯನ್ನು ಅನುಸರಿಸಿ ಬದುಕಬೇಕಾದಂತಹ ಸಂದರ್ಭದಲ್ಲಿ ಹೆಚ್ಚಿನ ಒತ್ತಡ ಹೆಣ್ಣಿನ ಮೇಲೆಯೇ ಬಂದು ಬೀಳುತ್ತದೆ. ಇವುಗಳಿಗೆಲ್ಲ ಸೂಕ್ಷ್ಮತೆಯಿಂದ ಪರಿಹಾರ ಕಂಡುಕೊಂಡಾಗ ಮಾತ್ರ ನಮ್ಮ ಕುಟುಂಬ ವ್ಯವಸ್ಥೆಯ ಸುಂದರ ಚಿತ್ರಗಳು ಕಣ್ ಮುಂದೆ ಕಟ್ಟಿಕೊಳ್ಳಲು ಸಾಧ್ಯ.

೯. **ಶೋಷಿತ ಬದುಕು ಮತ್ತು ಶೋಷಕ ಬದುಕಿನ ಬಗ್ಗೆ ನಿಮ್ಮ ಅಭಿಪ್ರಾಯ?**

ತಲತಲಾಂತರದಿಂದ ಬಂದ ನಮ್ಮ ಜಾತಿ–ವರ್ಗ ವ್ಯವಸ್ಥೆಯ ಮೂಲಕ ಅಸ್ಪೃಶ್ಯತೆಯ ಹೆಸರಿನಲ್ಲಿ ಶೋಷಣೆಗೊಳಗಾಗುವುದು ಒಂದು ವಿಧವಾದರೆ, ಹೆಣ್ಣು ತನ್ನ ಜೈವಿಕ ಹಾಗೂ ನೈಸರ್ಗಿಕ ಜವಾಬ್ದಾರಿಯ ಕಾರಣಕ್ಕೆ ಎರಡನೆಯ ದರ್ಜೆಯ ಪ್ರಜೆಯಾಗಿ ನಿರಂತರ ಶೋಷಣೆಗೊಳಗಾಗಬೇಕಾದದ್ದು ಇನ್ನೊಂದು ವಿಧ. ಎಷ್ಟೇ ಕಾನೂನು, ನೀತಿ ನಿಯಮಗಳು ಬಂದರೂ ಸಮಾನತೆಯ ಸಾಧನೆಯೆಡೆಗೆ ಮನಸುಗಳು ಬದಲಾಗದೇ ಶೋಷಣೆ ಕೊನೆಯಾಗಲು ಸಾಧ್ಯವಿಲ್ಲ. ನಮ್ಮ ದೇಶದಲ್ಲಿ ಮಲ ಹೊರುವ ಪದ್ಧತಿ ಇಂದಿಗೂ ಜೀವಂತವಿರುವುದು, ಇಂಥವೇ ಅನೇಕ ನಿಕೃಷ್ಟವೆನಿಸುವಂಥ ಕೆಲಸಗಳಲ್ಲಿ ಇಂದಿಗೂ ತಳಸಮುದಾಯಗಳು ತೊಡಗಿಕೊಳ್ಳಲೇಬೇಕಾದ ಅನಿವಾರ್ತೆಯ ಮೂಲಕ ನಿತ್ಯ ಶೋಷಣೆಗೊಳಪಡಬೇಕಿರುವುದು ಈ ವೈಜ್ಞಾನಿಕ ಯುಗದ ದುರಂತ. ಇದಕ್ಕೆ ಯಾಂತ್ರೀಕೃತ ವಿಧಾನಗಳ ಪರ್ಯಾಯಗಳನ್ನು ಹುಡುಕಿಕೊಳ್ಳಬೇಕಿರುವುದು ಇಂದಿನ ತುರ್ತು. ಹಾಗೆಯೇ ಇಂತಹ ವೃತ್ತಿಗಳಲ್ಲಿ ತೊಡಗಿಕೊಂಡವರಿಗೆ ಘನತೆಯ ಕೆಲಸ ನೀಡಿ ಪುನರ್ವಸತಿ ನೀಡುವುದೂ ಸರ್ಕಾರದ ಜವಾಬ್ದಾರಿಯಾಗಿದೆ. ಹೆಣ್ಣು ಮಕ್ಕಳು ಬಡತನದ ಅನಿವಾರ್ಯತೆಯಲ್ಲಿ ಅರಿವಿಲ್ಲದೇ ಹಾಗೂ ಬಲವಂತಕ್ಕೆ ಸಿಕ್ಕಿ, ಲೈಂಗಿಕ ವೃತ್ತಿಯನ್ನು

ಕೈಗೊಳ್ಳುವಂತಾಗಿರುವುದು ಹೆಣ್ಣಿನ ಶೋಷಣೆಯ ಪ್ರಬಲ ಜಾಲವಾಗಿ ಮಾರ್ಪಟ್ಟಿದೆ. ಎಲ್ಲರಿಗೂ ಸಮಾನ ಶಿಕ್ಷಣವನ್ನು ನೀಡುವಂಥಹ ಹಾಗೂ ವೃತ್ತಿ ಘನತೆಯನ್ನು ತಂದು ಕೊಡುವಂತಾ ಕೆಲಸಗಳ ನಿರ್ಮಾಣವಾದಾಗ ಮಾತ್ರ ಶೋಷಕರ ಅಟ್ಟಹಾಸ ಕಡಿಮೆಯಾಗಬಹುದು. ವಿದ್ಯೆ ಮತ್ತು ಅರಿವಿನಿಂದ ಶೋಷಿತರಲ್ಲಿ ಹಾಗೂ ಶೋಷಕರಲ್ಲಿ ಏಕ ಕಾಲಕ್ಕೆ ಬದಲಾವಣೆಯನ್ನು ತರಲು ಸಾಧ್ಯ.

೧೦. **ಸಂಸ್ಕೃತಿಯ ಅನಾವರಣದಲ್ಲಿ ದೇವರು, ಧರ್ಮ, ನಂಬಿಕೆ, ಸಂಪ್ರದಾಯಗಳು ಮತ್ತು ಮೂಢನಂಬಿಕೆಗಳ ಬಗ್ಗೆ ನಿಮ್ಮ ನಿಲುವು?**

ನಮ್ಮದು ಬಹುಸಂಸ್ಕೃತಿಯ ದೇಶ. ಇಲ್ಲಿ ಏಕಕಾಲಕ್ಕೆ ಒಟ್ಟಾಗಿ ಅನೇಕ ದೇವರು, ಧರ್ಮ ನಂಬಿಕೆ, ಮೂಢನಂಬಿಕೆಗಳು ಜೀವಿಸುತ್ತಿವೆ! ಅದರಿಂದಲೇ ಅನೇಕ ಬಾರಿ ಶ್ರೇಷ್ಠತೆಯ ಕಿತ್ತಾಟಗಳು ಘರ್ಷಣೆಗಳು ನಡೆಯುತ್ತಿರುತ್ತವೆ. ಇವುಗಳ ಹೆಸರಿನಿಂದಲೇ ಬಹಳಷ್ಟು ಬಾರಿ ಅಸಹಾಯಕರನ್ನು ದಮನಗೊಳಿಸುವ, ಮೋಸಗೊಳಿಸುವ, ಘಾಸಿಗೊಳಿಸುವ ಕೆಲಸಗಳು ನಡೆಯುತ್ತಿರುತ್ತವೆ. ಇವುಗಳನ್ನೇ ಅಸ್ತ್ರವಾಗಿಸಿಕೊಂಡು ಪುರೋಹಿತಶಾಹಿ ವಿಜೃಂಭಿಸುತ್ತಿರುತ್ತದೆ. ಎಷ್ಟೋ ಬಾರಿ ನಮ್ಮ ಲಿಖಿತ ಸಂವಿಧಾನವನ್ನೂ ಮೀರಿ ಈ ಅಲಿಖಿತ ಪರಂಪರಾಗತ ಬದುಕಿನ ಕ್ರಮವೇ ಚಾಲ್ತಿಯಲ್ಲಿರುತ್ತದೆ. ಆದರೆ ನಾನು ಇದೆಲ್ಲಕ್ಕಿಂತ ಸಮಾನತೆ, ಸೋದರತೆ ಹಾಗೂ ಸಹಬಾಳ್ವೆಯ ತತ್ವದಲ್ಲಿ ರೂಪಿತವಾದ ನಮ್ಮ ಸಂವಿಧಾನವೇ ಶ್ರೇಷ್ಠವೆಂದು ನಂಬಿದ್ದೇನೆ. ವೈಜ್ಞಾನಿಕ ತಳಹದಿಯ, ವೈಚಾರಿಕ ಜಾಗೃತಿ ನಮ್ಮಲ್ಲಿ ಮೂಡಿ ದೇವರು ಧರ್ಮ, ನಂಬಿಕೆ, ಸಂಪ್ರದಾಯಗಳು ಹಾಗೂ ಮೂಢನಂಬಿಕೆಗಳ ಜಾಗದಲ್ಲಿ ಮನುಷ್ಯ ಸಹಜವಾದ ಪ್ರೀತಿ, ಮಾನವೀಯತೆ, ಅಂತಃಕರಣಗಳು ಆವಿರ್ಭಾವಗೊಳ್ಳಬೇಕೆಂಬುದು ನನ್ನ ಆಶಯ. ದೇವರ ಕಲ್ಪನೆಯಿಂದಲೇ ಇಲ್ಲಿ ಇಷ್ಟೆಲ್ಲಾ ರಕ್ತಪಾತ, ಹಿಂಸೆ ಹುಟ್ಟಿಕೊಂಡಿದೆ ಎಂಬುದನ್ನು ನನ್ನ 'ನಿನ್ನಿಂದಲೇ' ಎಂಬ ಕವಿತೆಯಲ್ಲಿ ಚಿತ್ರಿಸುತ್ತಾ 'ಹುಟ್ಟಿಯೂ ಇಲ್ಲದ ಸಾವೂ ಇಲ್ಲದ ಹೇ ನಿರ್ದಯಿ ಅಪರಂಪಾರ, ನಿನ್ನಿಂದ ಮುಕ್ತಗೊಳದೇ ಕಟ್ಟಲಾಗದು ನಮ್ಮದೇ ಶುದ್ಧ ಮನುಷ್ಯ ಇತಿಹಾಸ" ಎಂದಿದ್ದೇನೆ.

೧೧. **ಆಧುನಿಕತೆ ಬಗೆಗಿನ ನಿಮ್ಮ ನಿಲುವು?**

ಆಧುನಿಕತೆ ಎಂಬುದು ಅತ್ಯಂತ ಸಹಜವಾದ ಪ್ರಕ್ರಿಯೆ. ಆದರೆ ಅದೇ ಅಭಿವೃದ್ಧಿಯಲ್ಲ ಎಂಬುದು ನಮಗೆ ತಿಳಿದಿರಬೇಕು. ಮನುಷ್ಯನ ಘನತೆಯ ಬದುಕಿಗೆ ಬೇಕಾಗುವಷ್ಟು ಆಧುನಿಕತೆಯ ಅಳವಡಿಕೆ ಸಾಕು. ಅದನ್ನೂ ಮೀರಿದರೆ, ಅತಿ ಸ್ವಾರ್ಥ ಹಾಗೂ ವೈಭೋಗದ ಆಸೆಯಿಂದ ಪ್ರಕೃತಿಯಿಂದ ಸಂಪತ್ತೆಲ್ಲವನ್ನೂ ಲೂಟಿ ಮಾಡಿ ಮುಂದಿನ ಪೀಳಿಗೆ ನೈಸರ್ಗಿಕ

ಸಂಪನ್ಮೂಲಗಳಿಲ್ಲದೇ ದಿಕ್ಕೆಡುವಂಥಹ ಸ್ಥಿತಿ ನಿರ್ಮಾಣವಾಗುತ್ತದೆ. ನಾವು ಈಗಾಗಲೇ ಅಂತಹ ಅಧೋಗತಿಯ ಹಾದಿಯಲ್ಲಿ ಇದ್ದೇವೆ. ಆಧುನಿಕವಾದುದೆಲ್ಲವೂ ಒಳಿತು, ಹಳೆಯದೆಲ್ಲ ಕೆಟ್ಟದ್ದು ಎಂಬ ಭ್ರಮೆ ಬಿಟ್ಟು ಎರಡರಲ್ಲೂ ಇರುವ ಉತ್ತಮ ಅಂಶಗಳನ್ನು ಮಿಳಿತಗೊಳಿಸಿ ಆರೋಗ್ಯಕರ ಸಮಾಜ ನಿರ್ಮಾಣ ಮಾಡಬೇಕೆಂಬುದು ನನ್ನ ಆಶಯ.

೧೨. **ಶಿಕ್ಷಣದ ಮಹತ್ವ ಏನನ್ನು ಹೇಳುತ್ತೀರ?**

ಶಿಕ್ಷಣ ಅರಿವಿನ ಹೆಬ್ಬಾಗಿಲು ಶಿಕ್ಷಿತ ಮತ್ತು ವಿವೇಚನಾಯುಕ್ತ ಸಮುದಾಯ ಮಾತ್ರ ಬಲಿಷ್ಠ ರಾಷ್ಟ್ರ ನಿರ್ಮಾಣ ಮಾಡಬಲ್ಲರು. ತಲೆತಲಾಂತರದಿಂದ ಶಿಕ್ಷಣದಿಂದ ವಂಚಿತರಾಗಿ ಈಗ ಶಿಕ್ಷಣ ಪಡೆಯುತ್ತಿರುವ ತಳಸಮುದಾಯ ಮತ್ತು ಮಹಿಳೆಯ ಇಂದಿನ ಬದಲಾಗುತ್ತಿರುವ ಸ್ಥಿತಿಯನ್ನು ನೋಡಿದರೆ ಅದರ ಮಹತ್ವ ನಮಗೆ ಸರಿಯಾಗಿ ಅರ್ಥವಾಗುತ್ತದೆ. ಸಮಾನ ಶಿಕ್ಷಣದಿಂದ ಮಾತ್ರ ಸಮಾಜದಲ್ಲಿ ಸಮಾನತೆಯನ್ನು ತರಲು ಸಾಧ್ಯ ಎಂದು ನನ್ನ ನಂಬಿಕೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಹಲವು ರೀತಿಯ ಅಸಮಾನ ಶಿಕ್ಷಣ ವ್ಯವಸ್ಥೆ ಇದ್ದು ಸಮಾಜದಲ್ಲೂ ಅಸಮಾನತೆ ಮುಂದುವರೆದಿದೆ. ಇನ್ನೂ ಲಕ್ಷಾಂತರ ಮಕ್ಕಳು ಶಾಲೆಯಿಂದ ಹೊರಗೇ ಇದ್ದಾರೆ. ಹಳ್ಳಿಗಾಡಿನ ದಲಿತ ಮತ್ತು ಹೆಣ್ಣು ಮಕ್ಕಳಿಗೆ ಮೂಲಭೂತ ಶಿಕ್ಷಣ ಕೂಡ ಇನ್ನೂ ಮರೀಚಿಕೆಯೇ ಆಗಿರುವುದು ವಿಪರ್ಯಾಸ. ಸದ್ಯ ಕರ್ನಾಟಕ ಸರ್ಕಾರ ಕಡಿಮೆ ಮಕ್ಕಳಿರುವ ನೆಪವೊಡ್ಡಿ ಸರ್ಕಾರಿ ಶಾಲೆಗಳನ್ನು ಮುಚ್ಚುವ ಮೂಲಕ ಗ್ರಾಮಾಂತರ ಮಕ್ಕಳು ಶಿಕ್ಷಣದಿಂದ ಶಾಶ್ವತವಾಗಿ ವಂಚಿತರಾಗುವಂತಹ ಪರಿಸ್ಥಿತಿ ಬಂದೊದಗಿದೆ. ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ಭರವಸೆಯಲ್ಲಿ ರೂಪಿತವಾಗಿರುವ ಶಿಕ್ಷಣ ಹಕ್ಕು ಕಾಯ್ದೆ ಪರಿಣಾಮಕಾರಿಯಾದ ರೀತಿಯಲ್ಲಿ ಅನುಷ್ಠಾನಗೊಂಡರೆ ಮಾತ್ರ ಶಿಕ್ಷಣ ವಂಚಿತರಿಗೆ ವಿದ್ಯೆ ಕೈಗೆಟುಕುತ್ತದಷ್ಟೇ.

೧೩. **ಕೂಲಿ ಕಾರ್ಮಿಕರ ಬದುಕಿನ ಬಗ್ಗೆ ನಿಮ್ಮ ಅನಿಸಿಕೆ?**

ಕೂಲಿಕಾರ್ಮಿಕರ ಬದುಕನ್ನು ಸುಧಾರಿಸುವ ನಿಟ್ಟಿನಲ್ಲಿ ಅನೇಕ ಕಾನೂನುಗಳು ರೂಪಿತವಾಗಿದ್ದರೂ ಅವುಗಳ ಅನುಷ್ಠಾನ ಇನ್ನೂ ಸರಿಯಾಗಿ ಆಗಿರದ ಕಾರಣ, ಅವರ ಬದುಕು ಇನ್ನೂ ಸುಧಾರಿಸಿಲ್ಲ. ಅಸಂಘಟಿತ ವಲಯದ ಕೂಲಿ ಕಾರ್ಮಿಕರು ಕಡಿಮೆ ವೇತನ, ದುಡಿಯುವ ಸ್ಥಳದಲ್ಲಿ ಮೂಲಭೂತ ಸೌಕರ್ಯಗಳ ಕೊರತೆ, ಮಾಲೀಕರಿಂದ ದೌರ್ಜನ್ಯ, ಅನಿಗದಿತ ಸಮಯದ ದುಡಿತದಂತಾ ಸಮಸ್ಯೆಗಳನ್ನು ಎದುರಿಸುತ್ತಾರೆ. ಕೆಲವು ಅಪಾಯಕಾರಿ ಉತ್ಪನ್ನಗಳ ತಯಾರಿಕೆಯಲ್ಲಿ ಜೀವಹಾನಿ, ಶಾಶ್ವತ ಅಂಗವೈಕಲ್ಯ, ದೀರ್ಘಕಾಲೀನ ರೋಗಪೀಡಿತರಾಗುವ ಸಂಭವವೂ ಅಧಿಕವಾಗಿದ್ದು ಈ ಕುರಿತು ಸರ್ಕಾರ ಯಾವುದೇ

ಎಚ್ಚರಿಕೆಯನ್ನೂ ವಹಿಸುತ್ತಿಲ್ಲವೆಂಬುದು ದುರಂತ. ಮಹಿಳಾ ಕೂಲಿ ಕಾರ್ಮಿಕರ ಸಮಸ್ಯೆ ಇನ್ನೂ ವಿಭಿನ್ನವೂ ತೀವ್ರವೂ ಆಗಿದ್ದು ದುಡಿಯುವ ಸ್ಥಳಗಳಲ್ಲಿ ಲೈಂಗಿಕ ದೌರ್ಜನ್ಯ, ಕಿರುಕುಳದಂತಹ ಸಮಸ್ಯೆಗಳನ್ನೂ ಎದುರಿಸುತ್ತಾರೆ. ಮಕ್ಕಳನ್ನು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರಾಗಿ ದುಡಿಸಿಕೊಳ್ಳುತ್ತಿದ್ದು, ಇದು ಕಾನೂನಿನ ರೀತಿ ಅಪರಾಧವಾದರೂ ಭಾರತದಲ್ಲಿ ಲಕ್ಷಾಂತರ ಮಕ್ಕಳು ಇದರ ಕಪಿಮುಷ್ಟಿಗೆ ಸಿಲುಕಿದ್ದಾರೆ. ಮಕ್ಕಳ ಹಕ್ಕುಗಳ ಕುರಿತು ಜಾಗೃತಿ ಮೂಡಿಸಿ, ಅವರು ಪ್ರಾಪ್ತ ವಯಸ್ಕರಾಗುವವರೆಗೆ ಉಚಿತ ಶಿಕ್ಷಣ ನೀಡಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕಿದೆ. ಒಟ್ಟಾರೆ ಕೂಲಿ ಕಾರ್ಮಿಕರ ಜೀವನ ಮಟ್ಟ ಸುಧಾರಣೆ ಭಾರತದಲ್ಲಿ ಇನ್ನೂ ನಿರೀಕ್ಷಿತ ನೆಲೆಯಲ್ಲಿ ಆಗಿಲ್ಲ.

೧೪. **ಜಾಗತೀಕರಣದ ಪ್ರಭಾವದ ಬಗ್ಗೆ ನಿಮ್ಮ ಅನಿಸಿಕೆ?**

ಜಾಗತೀಕರಣದಿಂದ ಎಲ್ಲವೂ ಉದ್ದಿಮೆಯಾಗಿ ಮಾರ್ಪಡುತ್ತಿದೆ. ಇಲ್ಲಿ ಎಲ್ಲವೂ ಮಾರಾಟದ ಸರಕೇ! ಪ್ರಾದೇಶಿಕ ಬಹುಸಂಸ್ಕೃತಿ ನಾಶವಾಗಿ, ಏಕ ಸಂಸ್ಕೃತಿ ತೆಕ್ಕೆಗೆ ಬೀಳುತ್ತಿದ್ದೇವೆ. ನಮ್ಮತನವನ್ನು ಉಳಿಸಿಕೊಳ್ಳಲು ಈಗ ಹೋರಾಟ ನಡೆಸಬೇಕಿದೆ. ಜಾಗತೀಕರಣದ ಫಲವಾಗಿ ಒಪ್ಪಿಕೊಂಡ ಮುಕ್ತ ಆರ್ಥಿಕ ನೀತಿ ಮತ್ತು ಉದಾರೀಕರಣದಿಂದಾಗಿ ಫಲವತ್ತಾದ ಬೆಳೆ ಬೆಳೆಯುವ ಭೂಮಿ ಮಾರಾಟವಾಗುತ್ತಿದೆ. ಹಳ್ಳಿಗಳಲ್ಲಿ ಕೆಲಸವಿಲ್ಲದೇ, ಬಡ ಕುಟುಂಬಗಳು ಪಟ್ಟಣಕ್ಕೆ ಗುಳೆ ಹೋಗುತ್ತಿವೆ. ಪುರುಷರು ಕೆಲಸ ಅರಸಿ ಬೇರೆಡೆಗೆ ಹೋದರೆ ಬಡ ಹೆಣ್ಣುಮಕ್ಕಳು ಕುಟುಂಬ ನಿರ್ವಹಣೆಗಾಗಿ ಅನಿವಾರ್ಯವಾಗಿ ವೇಶ್ಯಾವಾಟಿಕೆಗೆ ಇಳಿಯುತ್ತಿದ್ದಾರೆ. ಇನ್ನೊಂದೆಡೆ ಐಷಾರಾಮಿ ಬದುಕಿನ ಸೆಳೆತಕ್ಕೆ ಸಿಕ್ಕ ಆಧುನಿಕ ಹೆಣ್ಣುಮಕ್ಕಳು ಮಾರುಕಟ್ಟೆಯ ಸರಕಾಗುತ್ತಿದ್ದಾರೆ ಹಾಗೂ ಸರಕಿಗೆ ಮಾರುಕಟ್ಟೆ ನಿರ್ಮಾಣ ಮಾಡುವಲ್ಲಿ ತಮ್ಮನ್ನೇ ಮಾರಾಟ ಮಾಡಿಕೊಳ್ಳುತ್ತಿದ್ದಾರೆ ಜಾಗತೀಕರಣವನ್ನು ಹೇಗೆ ಸ್ವಾಗತಿಸಬೇಕು, ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಎಂಬ ಪೂರ್ವ ತಯಾರಿ ಮತ್ತು ಸಮರ್ಪಕ ಹಾಗೂ ದೃಢವಾದ ಯೋಜನೆಗಳು ಇಲ್ಲದ ಕಾರಣ ಅದರ ಸಮಾನ ಹಂಚಿಕೆಯಾಗದೇ ಬಡವರು ಇನ್ನಷ್ಟು ಬಡವರಾಗುತ್ತಾ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗಲು ಈ ಜಾಗತೀಕರಣ ಪೂರಕವಾಗುತ್ತಿದೆಯಷ್ಟೇ.

೧೫. **ಬಡತನ, ಹಸಿವು, ಸಾಮಾಜಿಕ ಕ್ರೌರ್ಯಗಳ ಬಗ್ಗೆ ಏನನ್ನು ಹೇಳುತ್ತೀರಿ?**

ಒಂದೆಡೆ ನಾವು ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸುತ್ತಿದ್ದೇವೆಂದು ಬೀಗುತ್ತಿದ್ದರೆ ಇನ್ನೊಂದೆಡೆ ಬಡತನ, ಹಸಿವಿನಿಂದ ಲಕ್ಷಾಂತರ ಜನರು ನಲುಗುತ್ತಿರುವುದು, ಈ ಪ್ರಮಾಣ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವುದು ವಾಸ್ತವ ಸತ್ಯ. ಇದರೊಂದಿಗೆ ಜಾತಿ–

ವರ್ಗ ಗ್ರಾಮೀಣ ಎಂಬ ತಾರತಮ್ಯದಿಂದಾಗಿ ಸಾಮಾಜಿಕ ಕ್ರೌರ್ಯವೂ ಹೆಚ್ಚಾಗುತ್ತಲೇ ಇದೆ. ವಿದ್ಯೆ ವಿವೇಕವನ್ನು ನೀಡದೇ ವಿನಾಶಕ್ಕೆ ಕಾರಣವಾಗುತ್ತಿರುವುದು ಢಾಳಾಗಿಯೇ ಗೋಚರಿಸುತ್ತಿದೆ. ದೇಶದ ಪ್ರತಿಯೊಬ್ಬ ನಾಗರೀಕನೂ ಆರೋಗ್ಯದಿಂದ, ಮೂಲ ಸೌಲಭ್ಯಗಳ ಯಾವುದೇ ರೀತಿಯ ಕೊರತೆ ಇರದೇ, ಶಿಕ್ಷಣ ಪಡೆದು, ವಿವೇಚನಾಯುತ ಬದುಕು ನಡೆಸಲು ಸಾಧ್ಯವಾಗುವಂತಹ ಆಡಳಿತವನ್ನು ನಮ್ಮ ಸರ್ಕಾರಗಳು ನೀಡುವಂತಾದಾಗ ಮಾತ್ರ ಬಡತನ, ಹಸಿವು, ಸಾಮಾಜಿಕ ಕ್ರೌರ್ಯಗಳು ಕೊನೆಗೊಳ್ಳಬಹುದು.

೧೬. **ಲಿಂಗ ಅಸಮಾನತೆ, ಸ್ತ್ರೀ ಸ್ಥಾನಮಾನದ ಬಗ್ಗೆ ನಿಮ್ಮ ಅಭಿಪ್ರಾಯ?**

ನಮ್ಮ ಸಂವಿಧಾನ ಸರ್ವರಿಗೂ ಸಮಾನ ಹಕ್ಕುಗಳನ್ನು ನೀಡಿದ್ದರೂ ಲಿಂಗ ಅಸಮಾನತೆ ಅತ್ಯಂತ ಸಹಜವೆಂಬಂತೆ ಭಾರತದಲ್ಲಿದೆ. ತನ್ನ ಜೈವಿಕ ಜವಾಬ್ದಾರಿಯಿಂದಾಗಿ ಮಹಿಳೆ ಅನನ್ಯಳೆಂದು ಗೌರವಿಸಲ್ಪಡಬೇಕಾಗಿತ್ತು ಆದರೆ ಅದೇ ಕಾರಣಕ್ಕೆ ಮಹಿಳೆ ದೌರ್ಜನ್ಯಕ್ಕೆ ಈಡಾಗುತ್ತಿದ್ದಾಳೆ. ಅವಳು ಮಾಡುವ ಮನೆಗೆಲಸ, ಮಕ್ಕಳ-ವೃದ್ಧರ ಲಾಲನೆ ಪಾಲನೆ, ಗೃಹಕೃತ್ಯ ...... ಮುಂತಾದವು ಸೇವೆ ಎಂದು ಪರಿಗಣಿಸಲ್ಪಡುವುದರಿಂದ ಅವುಗಳು ದೇಶದ ಒಟ್ಟು ಆರ್ಥಿಕ ವ್ಯವಸ್ಥೆಯಡಿ ಬರುವುದೇ ಇಲ್ಲ! ಆ ಕೆಲಸಕ್ಕೆ ಯಾವ ಪರ್ಯಾಯವೂ ಇಲ್ಲ. ಹೀಗಾಗಿ ಕುಟುಂಬದ ಜವಾಬ್ದಾರಿ ಹಾಗೂ ಕೆಲಸಗಳ ಸಮಾನ ಹಂಚಿಕೆಯಾಗುವವರೆಗೂ ಮಹಿಳೆಗೆ ಬಿಡುಗಡೆ ಇಲ್ಲ. ಸ್ತ್ರೀ ವಿದ್ಯಾಭ್ಯಾಸ, ಔದ್ಯೋಗಿಕ ಪಾಲ್ಗೊಳ್ಳುವಿಕೆ ಗಣನೀಯ ಪ್ರಮಾಣದಲ್ಲಿ ಏರಿದೆಯಾದರೂ, ಅದು ನಿರೀಕ್ಷಿತ ಮಟ್ಟವನ್ನು ಇನ್ನೂ ಮುಟ್ಟಬೇಕಿದೆ. ಮಹಿಳೆಯ ರಾಜಕೀಯ ಪಾಲ್ಗೊಳ್ಳುವಿಕೆ, ಸಾಮಾಜಿಕ, ಹಾಗೂ ಆರ್ಥಿಕ ಪಾಲ್ಗೊಳ್ಳುವಿಕೆಗಳು ಪುರುಷ ಪ್ರಧಾನ ವ್ಯವಸ್ಥೆಯ ಮರ್ಜಿಗೆ ಇಂದಿಗೂ ಒಳಪಟ್ಟಿರುವುದರಿಂದ, ಮಹಿಳೆಯ ಸ್ಥಾನಮಾನ ಇನ್ನೂ ದ್ವಿತೀಯ ದರ್ಜೆಯಲ್ಲೇ ಉಳಿದಿದೆ.

೧೭. **ಸಾಮಾಜಿಕ ಬದಲಾವಣೆಯನ್ನು ಹೇಗೆ ವ್ಯಕ್ತಪಡಿಸುತ್ತೀರಿ?**

ಎಲ್ಲ ರೀತಿಯ ಶೋಷಣೆಗಳು ಕೊನೆಗೊಂಡು, ಸಮಾಜದ ಕಟ್ಟ ಕಡೆಯ ಮನುಷ್ಯನೂ ಸಮಾನತೆಯ ಆಧಾರದಿಂದ ಉನ್ನತಿಯನ್ನು ಸಾಧಿಸುವಂತಾಗಬೇಕು. ಜಾತಿ-ವರ್ಗ-ಲಿಂಗಗಳ ತಾರತಮ್ಯವಿಲ್ಲದಂತಾಗುವುದು, ಪ್ರತಿ ವ್ಯಕ್ತಿಯೂ ವೈಚಾರಿಕ ಹಾಗೂ ವೈಜ್ಞಾನಿಕ ಚಿಂತನೆಗಳ ಶಿಕ್ಷಣ ಪಡೆದು ಮೂಢನಂಬಿಕೆಗಳಿಂದ ಮುಕ್ತಿ ಹೊಂದಿದಂತ ಆರೋಗ್ಯಕರ ಸಮಾಜ ನನ್ನ ನಿರೀಕ್ಷೆ ಬಹುಶಃ ಕನಸು!

೧೮. **ಶಕ್ತಿ ರಾಜಕಾರಣದ ಬಗ್ಗೆ ನಿಮ್ಮ ನಿಮ್ಮ ಅನಿಸಿಕೆ?**

ಇಂದಿನ ರಾಜಕಾರಣ, ಪ್ರಬಲ ಜಾತಿ ಮತ್ತು ಆರ್ಥಿಕ ಶಕ್ತಿ ಇದ್ದವರಿಗೆ ಮಾತ್ರ ಎನ್ನುವಂತಾಗಿದೆ. ಪ್ರಜಾಪ್ರಭುತ್ವವನ್ನು ಅಳವಡಿಸಿಕೊಂಡಿರುವ ನಮ್ಮ ದೇಶಕ್ಕೆ ಇದು ಕಪ್ಪು ಚುಕ್ಕಿ ಇಟ್ಟಂತಾಗಿದೆ. ಮಹಿಳೆ, ಅಲ್ಪಸಂಖ್ಯಾತರು ಹಾಗೂ ದುರ್ಬಲ ಜಾತಿಗಳು ರಾಜಕಾರಣ ಪ್ರವೇಶಿಸುವುದೂ, ಉನ್ನತ ಸಚಿವ ಹಾಗೂ ಅಧಿಕಾರ ಸ್ಥಾನ ಪಡೆಯುವುದು ಇನ್ನೂ ಕಷ್ಟ ಸಾಧ್ಯವೇ ಆಗಿದೆ. ಇದೆ ಕೊನೆಗೊಳ್ಳಬೇಕೆಂದರೆ ಈ ಅಸಹಾಯಕ ಸಮುದಾಯಗಳು ಒಗ್ಗೂಡಿ ಕೆಲಸ ಮಾಡುವ, ಶ್ರಮವಹಿಸುವ ಅನುವಾರ್ಯತೆ ಇದೆ.

೧೯. **ಸಾಮಾಜಿಕ ಸಂಘಟನೆಗಳ ಬಗ್ಗೆ ಮತ್ತು ಹೋರಾಟದ ಬಗ್ಗೆ ಏನು ಹೇಳುತ್ತೀರಿ?**

ಎಪ್ಪತ್ತರ ದಶಕದಲ್ಲಿ ಬೀಸಿದ ಬದಲಾವಣೆಯ ಗಾಳಿಯಿಂದಾಗಿ ದಲಿತ ಚಳುವಳಿ, ಬಂಡಾಯ ಚಳುವಳಿ, ಮಹಿಳಾ ಚಳುವಳಿ, ಕಾರ್ಮಿಕ ಚಳುವಳಿ, ರೈತ ಚಳುವಳಿ.......... ಇತ್ಯಾದಿಗಳು ರೂಪುಗೊಂಡು ವ್ಯವಸ್ಥೆಯ ಲೋಪದೋಷಗಳ ಎದುರು ದನಿ ಎತ್ತುವ, ಪ್ರಶ್ನೆ ಕೇಳುವ ಮೂಲಕ ಆಳುವ ವರ್ಗಕ್ಕೆ, ಆಡಳಿತಶಾಹಿಗೆ ಪ್ರಬಲ ಶಕ್ತಿಯಾಗಿ ನಿಂತವು, ಸಾಮಾಜಿಕ ಹೋರಾಟಕ್ಕೆ ಇವು ನಾಂದಿ ಹಾಡಿದವು. ಅಂದಿನಿಂದ ಪ್ರಾರಂಭವಾದ ಚಳುವಳಿ, ಹೋರಾಟಗಳು ಇಂದು ಸಮಾಜದಲ್ಲಿ ವ್ಯಾಪಕವಾಗಿ ಹಬ್ಬಿವೆ. ಆದರೆ ಅಂದಿನ ಕೆಚ್ಚು, ನೈತಿಕಶಕ್ತಿ, ಉತ್ತಮ ನಾಯಕತ್ವದ ಕೊರತೆ, ದೂರದೃಷ್ಟಿ ಇಲ್ಲದೇ ಆ ಕ್ಷಣದ ಪ್ರತಿಭಟನೆಗಳು ಮಾತ್ರ ಕಾಣುತ್ತವೆಯೇ ಹೊರತು ಪಟ್ಟು ಹಿಡಿದು ಅದನ್ನು ಗುರಿ ಮುಟ್ಟಿಸುವ ಸಾಮರ್ಥ್ಯ ಕಾಣುತ್ತಿಲ್ಲ. ಒಂದೇ ಉದ್ದೇಶದ ಹಲವು ಸಂಘಟನೆಗಳು ಹುಟ್ಟಿಕೊಂಡು, ಸ್ವಾರ್ಥ ಸಾಧನೆಗೆ, ಅಧಿಕಾರ, ಹಣ, ಕೀರ್ತಿಗಾಗಿ ಕಾಟಾಚಾರದ ಕೆಲಸ ಮಾಡುತ್ತಿರುವುದರಿಂದ ಜನರಲ್ಲಿ ಅವುಗಳ ಮೇಲಿನ ನಂಬಿಕೆ ಕಡಿಮೆಯಾಗಿದೆ. ಇದರ ಮಧ್ಯೆ ಕೂಡ ಶ್ರದ್ಧೆಯಿಂದ ಮತ್ತು ನಿಸ್ವಾರ್ಥವಾಗಿ ಸಾಮಾಜಿಕ ಸಂಘಟನೆಗಳನ್ನು ನಡೆಸುತ್ತಿರುವ, ಹೋರಾಟಗಳನ್ನು ರೂಪಿಸುತ್ತಿರುವ ವ್ಯಕ್ತಿಗಳು ನಮ್ಮ ಮಧ್ಯೆ ಇರುವುದು, ಕತ್ತಲಿನ ಮಧ್ಯೆಯ ಸಣ್ಣ ಬೆಳಕಿನ ಕಿಡಿಯಾಗಿ ಕಾಣುತ್ತಿದೆ. ಆದರೆ ವ್ಯವಸ್ಥೆಯ ಲೋಪದ ಎದುರು ಬೇರಿನ ಮಟ್ಟದಲ್ಲಿ ಸಶಕ್ತವಾದ ಹೋರಾಟವನ್ನು ರೂಪಿಸುವಂತಹ ಸಾಮಾಜಿಕ ಸಂಘಟನೆ ಹಾಗೂ ಸಧ್ಯಕ್ಕಂತೂ ಕಾಣುತ್ತಿಲ್ಲ.

೨೦. **ಸಮಾನತೆ, ಸೋದರತೆ, ಸಹಬಾಳ್ವೆಯ ಬಗ್ಗೆ ನಿಮ್ಮ ಅಭಿಪ್ರಾಯ?**

ಪ್ರೀತಿ, ಶಾಂತ, ನೆಮ್ಮದಿಯ ಸೌಹಾರ್ದಯುತ ಸಮಾಜದ ಕನಸು ಕಾಣುವ ಪ್ರತಿಯೊಬ್ಬರೂ ಸಮಾನತೆ, ಸೋದರತೆ, ಸಹಬಾಳ್ವೆಯ ಚಿಂತನೆಗಳನ್ನು ಮೆಚ್ಚುತ್ತಾರೆ ಮತ್ತು ಅದನ್ನು ಬದುಕಿನ ಮೌಲ್ಯವಾಗಿ ಅಳವಡಿಸಿಕೊಳ್ಳುತ್ತಾರೆ. ಅಂತಹವರಲ್ಲಿ ನಾನೂ ಒಬ್ಬಳು.

೨೧. **ಪ್ರಜಾತಾಂತ್ರಿಕತೆ, ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಏನು ಹೇಳುತ್ತೀರಿ?**

ನಮ್ಮ ಪ್ರಜಾತಾಂತ್ರಿಕ ವ್ಯವಸ್ಥೆ ಕಾನೂನು ಮತ್ತು ಕಡತದಲ್ಲಿ ಬಿಟ್ಟು ಇನ್ನೂ ಆಡಳಿತಾತ್ಮಕವಾಗಿ ಸಂಪೂರ್ಣವಾಗಿ ವಿಕೇಂದ್ರೀಕರಣ ಹೊಂದಿಲ್ಲ. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರಿಗೆ ರಾಜಕೀಯವಾಗಿ ಇಂದಿಗೂ ಶೇಕಡಾ ೩೩ರಷ್ಟು ಮೀಸಲಾತಿ ಜಾರಿಯಾಗಿಲ್ಲ. ಕೆಳಹಂತದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಜಾತಿ ಮತ್ತು ಲಿಂಗಾಧಾರಿತವಾದ ಮೀಸಲಾತಿ ಜಾರಿಯಾಗಿದ್ದರೂ ಅಧಿಕಾರವನ್ನು ಸಮರ್ಥವಾಗಿ ಉಪಯೋಗಿಸಿಕೊಳ್ಳುವ ಸಾಮರ್ಥ್ಯ ಮಹಿಳೆ ಮತ್ತು ಕೆಳ ಜಾತಿಯವರಿಗಿನ್ನೂ ಬಂದಿಲ್ಲ. ಅದಕ್ಕಾಗಿ ಅವರಿಗೆ ಸರಿಯಾದ ಶಿಕ್ಷಣ, ತಯಾರಿ ಮತ್ತು ತರಬೇತಿಯನ್ನು ನೀಡಬೇಕಿದೆ. ಜಾತಿ ಆಧಾರಿತವಾದ ಮೀಸಲಾತಿಯನ್ನು ಬಿಟ್ಟು ನಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಅಧಿಕಾರ ವಿಕೇಂದ್ರಿಕರಣಕ್ಕೆ ಬೇರೆ ಯಾವುದಾದರೂ ಮಾರ್ಗಗಳಿವೆಯೇ ಎಂದು ಪ್ರಜ್ಞಾವಂತರೆಲ್ಲಾ ಯೋಚಿಸಬೇಕೆಂದು ನನಗೆನಿಸುತ್ತದೆ. ಏಕೆಂದರೆ ಜಾತಿ ಇಂದು ನಿಂತ ನೀರಾಗಿ ಕೆಟ್ಟು ಹೋಗಿದೆ.

೨೨. **ಜಾತ್ಯಾತೀತತೆಯ ಬಗ್ಗೆ ನಿಮ್ಮ ಅಭಿಪ್ರಾಯ?**

ಹೇಳಿಕೊಳ್ಳಲು ನಮ್ಮದು ಜಾತ್ಯಾತೀತ ದೇಶ. ಆದರೆ ಇಲ್ಲಿ ಹೆಜ್ಜೆ ಹೆಜ್ಜೆಗೂ ಜಾತಿ ಕೆಲಸ ಮಾಡುತ್ತದೆ. ಜಾತೀಯತೆಯ ನಿರ್ಮೂಲನೆಗಾಗಿ ಅಂತರ್ಜಾತಿ ವಿವಾಹಗಳು ಹೆಚ್ಚಾಗಿ ನಡೆಯಬೇಕು. ಜಾತಿಯನ್ನು ಹೇಳುವ, ಕೇಳುವ ಮತ್ತು ಅದರ ಆಧಾರವಾಗಿ ಮನುಷ್ಯನನ್ನು ಅಳೆಯುವ ವಿಧಾನಗಳೆಲ್ಲವೂ ತಪ್ಪೆಂದು ನನಗೆನಿಸುತ್ತದೆ. ಜಾತಿಯನ್ನು ನಿರಾಕರಿಸಿ ಬದುಕನ್ನು ಕಟ್ಟಿಕೊಳ್ಳುವ ಛಾತಿ ನಮ್ಮ ಯುವಜನತೆಗೆ ಬರಬೇಕು. ನಾನು ಮೊದಲೇ ಹೇಳಿದಂತೆ ಎಲ್ಲ ಕ್ಷೇತ್ರಗಳಲ್ಲೂ ಜಾತಿಯನ್ನು ಹೊರತುಪಡಿಸಿ ವ್ಯಕ್ತಿತ್ವಗಳನ್ನು ದಾಖಲಿಸುವ, ಇತಿಹಾಸವನ್ನು ಕಟ್ಟಿಕೊಳ್ಳುವ ಪರ್ಯಾಯಗಳನ್ನು ಕಂಡುಕೊಳ್ಳಬೇಕು.

೨೩. **ವೈಜ್ಞಾನಿಕ ಮನೋಭಾವದ ಬಗೆಗೆ ನಿಮ್ಮ ನಿಲುವು?**

ವೈಜ್ಞಾನಿಕ ಮನೋಭಾವದ ಕೊರತೆಯಿಂದಲೇ ಇಂದಿಗೂ ಭಾರತದಲ್ಲಿ ಮೂಢನಂಬಿಕೆ, ಅಜ್ಞಾನ, ಅಂಧಶ್ರದ್ಧೆಗಳು ತಾಂಡವವಾಡುತ್ತಿವೆ. ಹೀಗೆಂದೇ ಹೆರವರು ಉಂಡು ಬಿಟ್ಟ ಎಂಜಲೆಲೆಯ ಮೇಲೆ ಉರುಳುವಂತಾ, ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ಬಸವಿ ಬಿಡುವಂತಾ, ಪ್ರಾಣಿಬಲಿ ನೀಡುವಂತಾ...... ಮುಂತಾದ ಅವೈಜ್ಞಾನಿಕ ಆಚರಣೆಗಳನ್ನು ಕಾಣುತ್ತೇವೆ. ಚಿಕ್ಕವಯಸ್ಸಿನಲ್ಲಿಯೇ ಮಕ್ಕಳಲ್ಲಿ ಎಲ್ಲವನ್ನೂ ಪ್ರಶ್ನಿಸಿಯೇ ಒಪ್ಪಿಕೊಳ್ಳುವ ಮನೋಭಾವವನ್ನು, ಬೆಳೆಸಬೇಕು. ಮುಖ್ಯವಾಗಿ ನಮ್ಮ ಪಠ್ಯಗಳಲ್ಲಿ ಎಲ್ಲವನ್ನೂ ಪ್ರಶ್ನಿಸಿಯೇ ಒಪ್ಪಿಕೊಳ್ಳುವ ಜಾಗೃತಗೊಳಿಸುವಂತಹ ಅಧ್ಯಾಯಗಳನ್ನು ಉದಾಹರಣೆಗಳ ಸಹಿತ ಅಳವಡಿಸಬೇಕು. ವೈಜ್ಞಾನಿಕ ಮನೋಭಾವದ ಕೊರತೆಯಿಂದಾಗಿಯೇ ಇಂದಿಗೂ ಉನ್ನತ ವ್ಯಾಸಂಗ ಮಾಡಿದವರು, ವಿಜ್ಞಾನದ ವಿದ್ಯಾರ್ಥಿಗಳೂ ಮೂಢನಂಬಿಕೆಗಳ ಮನೋಭಾವವನ್ನು ಬೆಳೆಸುವಂತಹ ಶಿಕ್ಷಣ ಮಾತ್ರ ನಿಜವಾದ ಶಿಕ್ಷಣ ಎಂದು ನನ್ನ ನಂಬಿಕೆ. ಅದಿಲ್ಲದ ಶಿಕ್ಷಣ ಗುಲಾಮರನ್ನು ಮಾತ್ರ ಸೃಷ್ಟಿಸಬಲ್ಲುದು ವೈಚಾರಿಕರನ್ನಲ್ಲ.

೨೪. **ಸಾಂಸ್ಕೃತಿಕ ಅನನ್ಯತೆಯ ಹುಡುಕಾಟದ ಬಗ್ಗೆ ನಿಮ್ಮ ಅನಿಸಿಕೆ?**

ನಾವು ಇದುವರೆಗೂ 'ನಮ್ಮ ಸಂಸ್ಕೃತಿ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾ ಆಚರಿಸುತ್ತಾ ಬಂದಿರುವುದು ಸಂಸ್ಕೃತಿಯ ನಯವಾದ ಮುಖವಾಡವನ್ನು ಹೊದ್ದ ಕೆಲವು ಭಾಗಗಳನ್ನು ಮಾತ್ರ ಯಜಮಾನ ಸಂಸ್ಕೃತಿಯ ಶೋಷಕ ವ್ಯವಸ್ಥೆ ತನಗೆ ಬೇಕೆಂದಂತೆ ರೂಪಿಸಿಕೊಂಡ ಸಂಸ್ಕೃತಿಯನ್ನೇ ಇದೇ ಸತ್ಯ, ಅಂತಿಮ, ಇದನ್ನೇ ಒಪ್ಪಿಕೊಳ್ಳಬೇಕು ಎಂದು ಸಾರ್ವತ್ರಿಕವಾಗಿ ಎಲ್ಲರ ಮೇಲೂ ಹೇರುತ್ತಾ ಬಂದಿದೆ. ಆದರೆ ಮಹಿಳೆ ಮತ್ತು ತಳಸಮುದಾಯಗಳ ಮೂಲಭೂತ ಕಚ್ಚಾ ಸಂಸ್ಕೃತಿಗಳು ಇತಿಹಾಸದಲ್ಲಿ ದಾಖಲೇ ಆಗಿಲ್ಲ. ಏಕೆಂದರೆ ನಮ್ಮ ಸಂಸ್ಕೃತಿ ನಿರ್ಮಾಣದಲ್ಲಿ ಇವರನ್ನೂ ಸೇರಿಸಿಕೊಳ್ಳುವ ಪ್ರಯತ್ನವೇ ಆಗಿಲ್ಲ. ಹೀಗಾಗಿ ಆಳದಲ್ಲೇ ಹೂತು ಹೋಗಿದ್ದ, ಅವರು ತಮ್ಮಷ್ಟಕ್ಕೇ ನಿರ್ಮಾಣ ಮಾಡಿಕೊಂಡ ಸಂಸ್ಕೃತಿಯ ಬಹುರೂಪಗಳನ್ನು ಸೂಕ್ಷ್ಮವಾಗಿ ಹುಡುಕುವ ಕೆಲಸ ಆಗಬೇಕಾಗಿದೆ. ಆ ಹುದುಗಿ ಹೋಗಿರುವ ಸಂಸ್ಕೃತಿಯನ್ನೂ ಮುಖ್ಯವಾಹಿನಿಯ ಭಾಗವಾಗಿಸಬೇಕಿದೆ. ಬಹು ಸಂಸ್ಕೃತಿಯ ದೇಶವಾದ ಭಾರತದಲ್ಲಿ ಪ್ರತಿ ಸಮುದಾಯದ ಸಂಸ್ಕೃತಿಯೂ ವಿಭಿನ್ನ ಮತ್ತು ಅನನ್ಯವೇ ಆಗಿದೆ. ಅದನ್ನು ಹುಡುಕಿ ತೆಗೆವ, ದಾಖಲಿಸುವ ಕೆಲಸಗಳು ಇನ್ನು ಮುಂದಾದರೂ ಆಗಬೇಕಿದೆ.

**೨೫. ಭಾರತೀಯ ಸಾಮಾಜಿಕ ಸಂಬಂಧ, ಸಾಮಾಜಿಕ ಬದುಕು ಮತ್ತು ಸಾಮಾಜಿಕ ಮನಸ್ಥಿತಿಯನ್ನು ಹೇಗೆ ಗ್ರಹಿಸಿದ್ದೀರಿ?**

ಮೇಲುನೋಟಕ್ಕೆ ಸಾಮಾಜಿಕ ಸಂಬಂಧಗಳೆಲ್ಲವೂ ಸರಿಯಾಗಿದೆ, ಸಂತೋಷದಾಯಕವಾಗಿದೆ. ಎನ್ನಿಸುತ್ತದೆ. ಆದರೆ ಆಳಕ್ಕೆ ಇಳಿಯುತ್ತಾ ಹೋದ ಹಾಗೆ ಮನಸಿನ ಒಳ ಪದರಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಜಾತಿ, ಧರ್ಮ, ಮತ, ಲಿಂಗ, ವರ್ಗಗಳ ನಡುವೆ ಬಹಳಷ್ಟು ಬಾರಿ ಅಂತರಂಗದಲ್ಲಿ ಕೆಲವು ಬಾರಿ ಬಹಿರಂಗದಲ್ಲಿ ಸಂಘರ್ಷಗಳು ಕಾಣುತ್ತಲೇ ಇವೆ. ಹೆಣ್ಣು ಭ್ರೂಣ ಹತ್ಯೆ, ವರದಕ್ಷಿಣೆ ಪಿಡುಗು, ಬಾಲ್ಯವಿವಾಹ, ಅದ್ದೂರಿ ಮದುವೆಯ ಖರ್ಚು, ಅತ್ಯಾಚಾರ, ಲೈಂಗಿಕ ಕಿರುಕುಳ....... ಹೀಗೆ ಹೆಣ್ಣುಮಕ್ಕಳು ಸಂಕಟವನ್ನು ಅನುಭವಿಸುತ್ತಿದ್ದರೆ, ಕೆಳ ಜಾತಿಯವರು, ಅಲ್ಪಸಂಖ್ಯಾತರು ಸಮಾನ ಹಕ್ಕುಗಳನ್ನು ಪ್ರತಿಪಾದಿಸಿದಾಗೆಲ್ಲ ದೌರ್ಜನ್ಯವನ್ನು ಅನುಭವಿಸುತ್ತಾರೆ. ಬಡವರ ಸಂಖ್ಯೆಯಲ್ಲಿ ಹೆಚ್ಚಳ ಉಂಟಾಗಿದ್ದು, ಉಳ್ಳವರು ಮತ್ತು ಇಲ್ಲದವರ ನಡುವಿನ ಅಂತರ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದು, ಪರಿಣಾಮವಾಗಿ ದರೋಡೆ, ಕಳ್ಳತನ, ಸುಲಿಗೆ, ಗಲಾಟೆಗಳ ಪ್ರಮಾಣ ಹೆಚ್ಚಾಗುತ್ತಿದೆ. ಪ್ರಪಂಚ ಇವತ್ತು ಹತ್ತಿರವಾಗುತ್ತಿದೆ. ಆದರೆ ಅದೇ ಸಂದರ್ಭದಲ್ಲಿ ಮನುಸುಗಳು ದೂರಾಗುತ್ತಿವೆ. ಸ್ವಾರ್ಥ, ಅಸೂಯೆ, ಲಾಭಕೋರತನದ ನಗ್ನ ಪ್ರದರ್ಶನ ನಡೆಯುತ್ತಿದ್ದು, ಸಾಮಾಜಿಕ ಬದುಕಿನಲ್ಲಿ ಲಂಚಕೋರತನ, ಭ್ರಷ್ಟಾಚಾರ ಮಿತಿ ಮೀರುತ್ತಿದ್ದು ಸಾಮಾಜಿಕತೆಗಿಂತ ವೈಯಕ್ತಿಕತೆಗೆ, ಸಾರ್ವತ್ರಿಕತೆಗಿಂತ ಖಾಸಗಿ ಬದುಕಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದು, ಹಣವೇ ಎಲ್ಲವನ್ನೂ ನಿರ್ಧರಿಸುವ ಅಸ್ತ್ರವಾಗಿ ಮಾರ್ಪಟ್ಟಿದೆ. ಮೌಲ್ಯ, ನೈತಿಕತೆ, ಮಾನವೀಯತೆ, ಅಂತಃಕರಣ...... ಗಳೆಲ್ಲಾ ತಮಾಷೆಯ ಪದಗಳಾಗಿ ಅರ್ಥ ಕಳೆದುಕೊಂಡು ಬಿಟ್ಟಿದೆ.

**೨೬. ನಿಮ್ಮ ಕಾವ್ಯದಲ್ಲಿ ಹೇರಳವಾಗಿ ಪ್ರತಿಮೆಗಳನ್ನು ಬಳಸಿದ್ದೀರಿ. ಇದು ಹೇಗೆ ಸಾಧ್ಯವಾಯಿತು?**

ಬಹುಶಃ ಮುಕ್ತ ಅಭಿವ್ಯಕ್ತಿಗೆ ನಿರ್ಬಂಧಗಳು ಹೆಚ್ಚಿದ್ದಷ್ಟೂ ರೂಪಕ, ಪ್ರತಿಮೆ, ಸಂಕೇತಗಳ ಬಳಕೆ ಹೆಚ್ಚಾಗುತ್ತದೆಂದೆನಿಸುತ್ತದೆ. ಇರುವ ಸ್ಥಿತಿಯನ್ನು ಒಪ್ಪಿಕೊಳ್ಳದ, ನಿರಂತರ ಪ್ರಶ್ನಿಸುವ ಮನಸ್ಸು ಅದನ್ನು ಅಭಿವ್ಯಕ್ತಿಸುವಾಗ ಸಹಜವಾಗಿಯೇ ಪ್ರತಿಮೆಗಳ ಮೂಲಕ ಅದನ್ನು ಹೊರಹಾಕುತ್ತದೆ. ಹೀಗೆಂದೇ ಕಾವ್ಯ ಕವಿಯ ಮೊದಲ ಪ್ರತಿಮೆಗಳ ಮೂಲಕ ಅದನ್ನು ಹೊರಹಾಕುತ್ತದೆ. ಹೀಗೆಂದೇ ಕಾವ್ಯ ಕವಿಯ ಮೊದಲ ಪ್ರತಿಭಟನೆ ಎಂಬ ಮಾತಿದೆ. ನಮ್ಮೊಳಗಿನ ಭಾವಕ್ಕೆ ಭಾಷೆಯ ರೂಪ ಕೊಡುವುದು ಒಂದು ಸವಾಲಾದರೆ, ಅದನ್ನು ಪ್ರತಿಮೆಯ ಮೂಲಕ ಹೊರ ಪ್ರಪಂಚಕ್ಕೆ ತಲುಪಿಸುವ ಪ್ರಯತ್ನ ಇನ್ನೂ ದೊಡ್ಡ ಸಾಹಸದ ಕೆಲಸ. ಬಹುಶಃ ಇದು ರೂಪಕವನ್ನು ಬುದ್ಧಿ ಉಪಯೋಗಿಸಿ ಕಟ್ಟಿಕೊಳ್ಳಬಲ್ಲ ಸಾಧ್ಯತೆಯಲ್ಲ.

ತಹತಹಿಸುವ ಮನಸು ಒಳಗಿನಿಂದಲೇ ಸಾವಯವಗೊಂಡು ರೂಪಕದ ಪರಿಭಾಷೆಯಲ್ಲೇ ಕಾವ್ಯವೊಂದು ತಾನಾಗಿಯೇ ಹುಟ್ಟಿಕೊಳ್ಳಲು ಮಾಡುವ ಒಂದು ಸಿದ್ಧತೆಯ ಪ್ರಶ್ನೆ. ಅದನ್ನು ಹೀಗೆ ಎಂದು ವಿವರಿಸಲು ಸಾಧ್ಯವಿಲ್ಲ.

೨೭. **ಪ್ರತಿ ಐದು ವರ್ಷಗಳಿಗೊಮ್ಮೆ ಒಂದು ಕವನ ಸಂಕಲನವನ್ನು ಪ್ರಕಟಿಸುವುದರ ರಹಸ್ಯವೇನು?**

ಬಹುಶಃ ನನ್ನ ಬರವಣಿಗೆಯ ಶಕ್ತಿ ಇರುವುದು ಅಷ್ಟೇ ಇರಬಹುದು. ಕಾರ್ಖಾನೆಯ ರೀತಿಯಲ್ಲಿ ಬರೆಯಲು ನನಗಾಗುವುದಿಲ್ಲ. ಎಷ್ಟೋ ಬಾರಿ ಒಂದು ಕವಿತೆ ಹೊರಬರಲು ತಿಂಗಳಾನುಗಟ್ಟಲೆ ಸಮಯ ಹಿಡಿದಿರುತ್ತದೆ. ಅದರಲ್ಲಿ ಉತ್ತಮವಾದುದನ್ನಷ್ಟೇ ಕ್ರೋಢೀಕರಿಸಿ ಸಂಕಲನ ಪ್ರಕಟಿಸುತ್ತಾ ಬಂದಿರುವೆನಷ್ಟೇ. ರಹಸ್ಯವೇನೂ ಇಲ್ಲ. ಕುಟುಂಬ ಯೋಜನೆಯೂ ಅಲ್ಲ.

೨೮. **ನಿಮ್ಮ ನಿರ್ಮಿತಿಗೆ ಹಾಸನದ ವಾತಾವರಣ ಹೇಗೆ ಸ್ಫೂರ್ತಿಯಾಗಿದೆ?**

ಪ್ರಾರಂಭದಲ್ಲಿ ಹಾಸನದ ಮನೆ ಮನೆ ಕವಿಗೋಷ್ಠಿ, ಲೇಖಕಿಯರ ಬಳಗ, ಜಿಲ್ಲಾ ಸಾಹಿತ್ಯ ಪರಿಷತ್ತು ಪೂರಕ ವಾತಾವರಣವನ್ನು ನಿರ್ಮಿಸಿಕೊಟ್ಟಿದ್ದು ನಿಜ. ಅದಕ್ಕಿಂತ ಮುಖ್ಯವಾಗಿ ನಾನು ತೊಡಗಿಸಿಕೊಂಡಿರುವ ಬೀದಿಯ ಕೆಲಸಗಳು ನನ್ನ ಅನುಭವವನ್ನು ವಿಸ್ತರಿಸುತ್ತಾ ಬಂದಿವೆ. ಆ ಅನುಭವ ಎಲ್ಲೋ ಆಳದಲ್ಲಿ ನನ್ನ ಕವಿತೆಗೆ ಸಾರಸತ್ವವೂ ಆಗುತ್ತಿರಬೇಕೆನಿಸುತ್ತದೆ. ಆದರೆ ಕಾವ್ಯವೆನ್ನುವುದು ಹೊರಗಿನ ಸಿದ್ಧತೆ ಅಥವಾ ಸ್ಫೂರ್ತಿಯಿಂದ ಮಾತ್ರ ಹೊರಹೊಮ್ಮುವುದಿಲ್ಲ. ಅದು ಮನಸಿನೊಳಗಿನ ಒತ್ತಡ, ಅಶಾಂತಿ, ತಳಮಳಗಳ ಕ್ರೋಢೀಕರಣದಿಂದ, ಇನ್ನು ಒಳಗುಳಿಯುವುದು ಸಾಧ್ಯವೇ ಇಲ್ಲ ಎಂದೆನಿಸಿದಾಗ ಉಕ್ಕುವ ಅಭಿವ್ಯಕ್ತಿ. ಹೀಗಾಗೇ ಒಲಗಿನ ಮನಸಿನ ಹದವೂ ಹೊರಗಿನ ವಾತಾವರಣದಷ್ಟೇ ಮುಖ್ಯ. ಬಹುಶಃ ಇದನ್ನು ನಾವು ನಮಗರಿವಿಲ್ಲದೆಯೋ ಉದ್ದೇಶಪೂರ್ವಕವಾಗಿಯೋ ಪಕ್ಕಕ್ಕೆ ತಳ್ಳಿಬಿಡುತ್ತಿದ್ದೇವೇನೋ.....

೨೯. **ನಿಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿರುವುದು ಸ್ತ್ರೀವಾದವೋ, ಸ್ತ್ರೀ ಸಂವೇದನೆಯೋ? ಅಥವಾ ಸಾರ್ವತ್ರಿಕವಾದ ಮೌಲ್ಯಗಳೋ?**

ಎಲ್ಲವೂ ಹೌದು, ಹಾಗೂ ಯಾವುದೂ ಅಲ್ಲವಿರಬಹುದು. ಮೂಲತಃ ನಾನೊಬ್ಬ ವ್ಯಕ್ತಿ. ಹೆಣ್ಣಾಗಿರುವ ಕಾರಣಕ್ಕೆ ನಮ್ಮ ಪುರುಷ ಪ್ರಧಾನವಾದ, ಪುರುಷ ಕೇಂದ್ರಿತವಾದ ಸಮಾಜದಲ್ಲಿ ನನ್ನ ಸಂವೇದನೆಗಳು ಬೇರೆಯದೇ ಹಣೆಪಟ್ಟಿಯಲ್ಲಿ, ಬೇರೆಯಾಗಿ ಕಾಣಬಹುದಷ್ಟೇ. ಅದಕ್ಕೆ ಸ್ತ್ರೀವಾದ, ಸ್ತ್ರೀ ಸಂವೇದನೆ ಎಂಬ ಉಪಶೀರ್ಷಿಕೆಗಳು ಹುಟ್ಟಿಕೊಂಡುಬಿಡುತ್ತವೆ. ಆದರೆ ಗಂಡು-ಹೆಣ್ಣು ಇಬ್ಬರನ್ನೂ ಒಟ್ಟಾಗಿ ಒಳಗೊಳ್ಳುವ ಸಾಮಾಜಿಕ ಅಥವಾ ಸಾಹಿತ್ಯಿಕ ಸ್ಥಿತಿ

ನಿರ್ಮಾಣವಾದರೆ ನನ್ನದೂ ಕೂಡ ಸಾರ್ವಕಾಲಿಕ ಮತ್ತು ಸಾರ್ವತ್ರಿಕ ಸತ್ಯವಷ್ಟೇ ಆಗಬಹುದೇನೋ..... ಒಟ್ಟಾರೆ ಇದು ಮನುಷ್ಯೆಯೊಬ್ಬಳ ಸಂವೇದನೆ ಅಷ್ಟೇ.

೩೦. **ಪ್ರಸ್ತುತ ಮಹಿಳಾ ಕಾವ್ಯದ ಬಗ್ಗೆ ನಿಮ್ಮ ಗ್ರಹಿಕೆಗಳೇನು? ಅದರ ಮುಂದಿನ ದಾರಿಯನ್ನು ಕುರಿತು ಏನು ಹೇಳುತ್ತೀರಿ?**

ಪ್ರಸ್ತುತ ಮಹಿಳಾ ಕಾವ್ಯ ಸಶಕ್ತವಾಗಿ ಹೊರಬರುತ್ತಿರುವ ಕುರಿತು ವಿಮರ್ಶಕರು ಆಶಾವಾದ ವ್ಯಕ್ತಪಡಿಸಿದ್ದಾರೆ. ಇದುವರೆಗೆ ಬಚ್ಚಿಟ್ಟುಕೊಂಡಿದ್ದ ಮಹಿಳೆಯದೇ ಅನನ್ಯತೆಯ, ನಿಗೂಢವಾಗಿದ್ದ ಒಂದು ಲೋಕ ಕಾವ್ಯದಲ್ಲಿ ಅಭಿವ್ಯಕ್ತಿಗೊಳ್ಳುತ್ತಿದೆ. ನಾನಾಗಲೇ ಹೇಳಿದಂತೆ ಅದು ಅವರ ಪ್ರತಿರೋಧದ ಅಭಿವ್ಯಕ್ತಿಯೂ ಆಗಿ ಕಾಣುತ್ತಿದೆ. ಮುಂದಿನ ಅದರ ದಾರಿಯ ಕುರಿತು ನಾನೇನೂ ಹೇಳಲಾರೆ. ಏಕೆಂದರೆ ಅಭಿವ್ಯಕ್ತಿ ಎನ್ನುವುದು ಯಾವತ್ತೂ ಯಾವ ನಿರ್ದೇಶನವನ್ನೂ ಲೆಕ್ಕಿಸದೇ ಹೊರಹೊಮ್ಮುವಂತದ್ದು. ಇಂದಿನವರೆಗೆ ತನ್ನ ಸುತ್ತಿನ ಕೋಟೆಯಿಂದ ಬಿಡಿಸಿಕೊಳ್ಳುವುದರಲ್ಲೇ, ಹಕ್ಕು ಸ್ಥಾಪನೆಯಲ್ಲೇ ನಿರತವಾಗಿದ್ದ ಮಹಿಳಾ ಕಾವ್ಯ ಇನ್ನೂ ಪೂರ್ಣ ಪ್ರಮಾಣದಲ್ಲಿ ತನ್ನ ಅಂತಃಸತ್ವದಿಂದ ಹೊರಹೊಮ್ಮಬೇಕಾಗಿದೆ. ಅದಕ್ಕೆ ಮತ್ತಿಷ್ಟು ಕಾಲವೂ ಬೇಕೇನೋ. ಆದರೆ ಇಂದು ಗ್ರಾಮೀಣ ಪ್ರದೇಶದ ಬೇರೆ ಬೇರೆ ಸಮುದಾಯದ ಯುವಕರು ಸಾಹಿತ್ಯ ರಚನೆಯಲ್ಲಿ ತೊಡಗಿಕೊಳ್ಳುತ್ತಿರುವ ಪ್ರಮಾಣಕ್ಕೆ ಹೋಲಿಸಿದರೆ ಯುವತಿಯರು ಸಾಹಿತ್ಯ ಕ್ಷೇತ್ರಕ್ಕೆ ಬರುತ್ತಿರುವುದು ಕಡಿಮೆಯಾಗಿದೆ. ಇದು ನನ್ನಂತವರಿಗೆ ಚಿಂತೆಗೀಡುಮಾಡುವ ವಿಷಯವೂ ಹೌದು.

೩೧. **ಎತ್ತಿನಹೊಳೆ ಯೋಜನೆ ವಿರೋಧಿ ಚಳವಳಿಯಲ್ಲಿ ತಾವು ಪಾಲ್ಗೊಳ್ಳಲು ಕಾರಣವೇನು? ಬಯಲುಸೀಮೆ ಜಿಲ್ಲೆಗಳ ನೀರಿನ ಸಮಸ್ಯೆಗೆ ನೀವು ಸೂಚಿಸುವ ಪರಿಹಾರಗಳೇನು?**

ಇಂದು ಮರು ಉತ್ಪಾದಿಸಬಲ್ಲ ಚೈತನ್ಯಗಳಾದ ಪ್ರಕೃತಿ ಮತ್ತು ಹೆಣ್ಣು ಇಲ್ಲದ ಸ್ಥಿತಿಯೂ ಸಂಕಟದಲ್ಲಿದೆ. ಕಾಡು, ಖನಿಜ, ನೆಲ, ಜಲವನ್ನು ಲೂಟಿ ಹೊಡೆದು ಮುಗಿಸಲಾಗುತ್ತಿದೆ. ಇನ್ನೊಂದೆಡೆ ಹೆಣ್ಣು ಜೀವವನ್ನು ಗರ್ಭದಲ್ಲೇ ನಾಶ ಮಾಡಿ ಹೆಣ್ಣು ಸಂತತಿಯ ಮೇಲೇ ಅತ್ಯಾಚಾರವೆಸಗಲಾಗುತ್ತಿದೆ. ಇಂತಹ ಸ್ಥಿತಿಯಲ್ಲಿ ಯಾವುದೇ ದೂರದೃಷ್ಠಿ ಇರುವ ವ್ಯಕ್ತಿ ಅವುಗಳ ರಕ್ಷಣೆಗೆ ನಿಲ್ಲಬೇಕು, ಮತ್ತು ಅದರ ಉಳಿವಿಗೆ ಬೇಕಾದ ಪೂರಕ ವಾತಾವರಣ ಸೃಷ್ಠಿಸಬೇಕು. ಅದು ನಮ್ಮ ಮೇಲಿರುವ ಜವಬ್ದಾರಿ ಎಂದು ನಾನು ಭಾವಿಸುತ್ತೇನೆ. ನನ್ನ ಎತ್ತಿನಹೊಳೆ ಯೋಜನೆಯ ವಿರೋಧ ಈ ಹಿನ್ನೆಲೆಯಲ್ಲಿ ಒಂದು ಹೆಜ್ಜೆಯಷ್ಟೇ, ಯೋಜನೆಯಿಂದ ಸಾವಿರಾರು ಹೆಕ್ಟೇರ್ ಅರಣ್ಯ ನಾಶವಾಗುತ್ತದೆ. ಅನೇಕ ಅಮೂಲ್ಯ

ಅಪರೂಪದ ವೈವಿಧ್ಯಮಯ ಜೀವಪ್ರಭೇದಗಳು, ಮರಗಳು ನಿರ್ನಾಮವಾಗುತ್ತವೆ. ಅವನ್ನು ಪುನರ್ ಸೃಷ್ಟಿಸಲು ಮನುಷ್ಯರಿಗೆ ಎಂದಿಗೂ ಸಾಧ್ಯವಿಲ್ಲ.

ಇದರ ಜೊತೆಗೆ ಕಾಡಿನೊಳಗೆ ನಡೆಯುವ ಈ ಯೋಜನೆಯ ಕಾಮಗಾರಿಗಳಿಂದಾಗಿ ಅದರೊಳಗಿನ ಪ್ರಾಣಿಗಳ ಜೀವನ ವಿಧಾನ ಅಸ್ತವ್ಯಸ್ತಗೊಳ್ಳುತ್ತದೆ. ಈಗಾಗಲೇ ಅಪಾರ ಪ್ರಮಾಣದ ಕಾಡಿನ ಒತ್ತುವರಿಯಿಂದಾಗಿ ನಾಡಿನೊಳಗೆ ನುಗ್ಗುತ್ತಿರುವ ವನ್ಯಜೀವಿಗಳ ಪ್ರಮಾಣ ಈ ವೈಜ್ಞಾನಿಕ ವಿಧಾನದ ಕಾಡು ನಾಶದಿಂದ ಇನ್ನಷ್ಟು ಹೆಚ್ಚಿ, ಜನರು ತಮ್ಮ ಮನೆ ಮಠಗಳ ಜೊತೆಗೆ ಬೆಳೆಯನ್ನೂ ಕಳೆದುಕೊಳ್ಳುತ್ತಿದ್ದಾರೆ. ಜೊತೆಗೆ ಜೀವನವನ್ನೂ ಕಳೆದುಕೊಳ್ಳುತ್ತಿದ್ದಾರೆ. ಈಗಾಗಲೇ ಕಾಡಿನ ಅಂಚಿನ ಸಹಸ್ರಾರು ಜನರ ಜೀವನ ಅಸ್ತವ್ಯಸ್ತವಾಗಿದೆ. ಅವರು ಜೀವ ಕೈಯಲ್ಲಿ ಹಿಡಿದು ಬದುಕುತ್ತಿದ್ದಾರೆ.

ಹೀಗಾಗಿ ಯಾವುದೇ ಯೋಜನೆಯೂ ಅರಣ್ಯದೊಳಗೆ ನಡೆಯದಂತೆ ವೈಜ್ಞಾನಿಕ ಪರ್ಯಾಯ ವಿಧಾನಗಳ ಮೂಲಕ ನೀರು, ವಿದ್ಯುತ್ತನ್ನು ಸೃಷ್ಟಿಸಿಕೊಳ್ಳುವ ಕಡೆಗೆ ಗಮನಹರಿಸಬೇಕಿದೆ. ಈ ನಿಟ್ಟಿನಲ್ಲಿ ರಾಜಸ್ಥಾನದ ರಾಜೇಂದ್ರಸಿಂಗ್, ಲಕ್ಷ್ಮಣ್‌ಸಿಂಗ್ ಅವರ, ಚೌಕ ಪದ್ಧತಿ, ಜೋಹಡ್ ನಿರ್ಮಾಣ ಪದ್ಧತಿಗಳ ಮೂಲಕ ಭೂಮಿಗೆ ಬಿದ್ದ ಮಳೆ ನೀರನ್ನು ಅಲ್ಲೇ ಇಂಗಿಸುವ, ಸಂಗ್ರಹಿಸುವ ವಿಧಾನಗಳನ್ನು, ರೂಢಿಸಿಕೊಳ್ಳಬೇಕು. ಆ ಮೂಲಕ ಅಂತರ್ಜಲವನ್ನು ಹೆಚ್ಚಿಸುವ ಪ್ರಯತ್ನಗಳಾಗಬೇಕು. ವಿದ್ಯುತ್ತಿಗಾಗಿ ಸೌರಶಕ್ತಿ, ಸಮುದ್ರದ ಅಲೆಗಳ ಶಕ್ತಿ ಮುಂತಾದ ಪ್ರಯೋಗಗಳು ಈಗಾಗಲೇ ವಿದೇಶದಲ್ಲಿ ಯಶಸ್ವಿಯಾಗಿವೆ. ಪ್ರಕೃತಿಯಿಂದಲೇ ಪ್ರಕೃತಿಯನ್ನು ಮರು ಸೃಷ್ಟಿಸುವ ವಿಧಾನಗಳಿಂದ, ಮತ್ತು ಪ್ರಕೃತಿ ಕೇಂದ್ರಿತ ಅಭಿವೃದ್ಧಿಯ ಪರಿಕಲ್ಪನೆಯಿಂದ ಮಾತ್ರ ಮನುಷ್ಯ ಪೀಳಿಗೆ ನೆಮ್ಮದಿಯಿಂದ ಬದುಕಬಹುದೇ ಹೊರತು ಈ ರೀತಿಯ ಪ್ರಕೃತಿ ನಾಶದಿಂದ, ಮನುಷ್ಯ ಕೇಂದ್ರಿತ ಅಭಿವೃದ್ಧಿ ಕಾರ್ಯಗಳಿಂದ ಭೂಮಿಯೇ ನಾಶವಾಗುವ ಸ್ಥಿತಿ ಬರಬಹುದು.

೩೨. **ಸರ್ಕಾರ ಹೊಸ ಸಾಂಸ್ಕೃತಿಕ ನೀತಿಯನ್ನು ರೂಪಿಸಲು ಹೊರಟಿದೆ ಈ ಬಗ್ಗೆ ನಿಮ್ಮ ನಿಲುವೇನು?**

ಈಗಾಗಲೇ ಸಾಂಸ್ಕೃತಿಕ ನೀತಿಯ ಕರಡನ್ನು ಸಮಿತಿ, ಸರ್ಕಾರಕ್ಕೆ ಒಪ್ಪಿಸಿದೆ. ಕೆಲವು ಅಂಶಗಳು ಚೆನ್ನಾಗಿವೆ. ಅವುಗಳನ್ನು ಪ್ರತ್ಯೇಕಗೊಳಿಸದೇ ಸಂಬಂಧಿಸಿದ ಆಯಾ ಇಲಾಖೆಗಳಿಗೆ ಅನುಷ್ಠಾನಗೊಳಿಸಲು ಒಪ್ಪಿಸಬಹುದೆನಿಸುತ್ತದೆ. ಮೇಲ್ನೋಟಕ್ಕೆ ಸಾಂಸ್ಕೃತಿಕ ನೀತಿಯಿಂದ ಯಾವುದೇ ಹಾನಿಯೂ ಕಾಣುತ್ತಿಲ್ಲ. ಆದರೆ 'ನೀತಿ' ಎಂಬ ಪದಕ್ಕೆ ಸಂಕೀರ್ಣವಾದ ಅರ್ಥವಿರುವುದರಿಂದ ಮುಂಬರುವ ಸರ್ಕಾರಗಳು ಇದನ್ನು ವ್ಯತಿರಿಕ್ತವಾಗಿ ಬಳಸಿಕೊಳ್ಳುವ ಸಾಧ್ಯತೆಗಳಿರಬಹುದೆನಿಸುತ್ತದೆ. ಮುಂದೆ ನೀತಿಯ ಹೆಸರಿನಲ್ಲಿ ವೈಯಕ್ತಿಕ ಸಾಂಸ್ಕೃತಿಕ

ಸ್ವಾಂತಂತ್ರ್ಯಕ್ಕೆ, ನಾಡಿನ ಬಹುಸಂಸ್ಕೃತಿಗೆ ಧಕ್ಕೆ ತರುವ ಕೆಲಸಗಳು ನಡೆಯದಂತೆ ನೋಡಿಕೊಳ್ಳಬೇಕಾದರೆ ಈಗಲೇ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕೆನಸುತ್ತದೆ. ಮತ್ತು ಹಾಗಾಗದಂತೆ ತಡೆಯಲು ಬೇಕಾದ ಕಠಿಣ ಕ್ರಮಗಳನ್ನೂ ಸೂಚಿಸಬೇಕೆನಿಸುತ್ತದೆ. ಸಂಸ್ಕೃತಿಯ ಕುರಿತು ಪಾಠ ಹೇಳಲು ಶಾಲೆಗಳಲ್ಲಿ ಶಿಕ್ಷಕನನ್ನು ನೇಮಿಸಿಕೊಳ್ಳುವುದರಿಂದ ಮುಂದೆ ಅದಕ್ಕೆ ಪಠ್ಯವನ್ನೂ ಯೋಜಿಸಬೇಕಾದಾಗ ತೊಂದರೆಗಳಾಗುವ ಸಾಧ್ಯತೆ ಇದೆಯೆನಿಸುತ್ತದೆ.

೩೩. **ಸರ್ಕಾರ ಮೂಢನಂಬಿಕೆಗಳ ಪ್ರತಿಬಂಧಕ ಕಾಯ್ದೆಯನ್ನು ತರಲು ಹೊರಟಿರುವ ಸಂದರ್ಭದಲ್ಲಿ ನಿಮ್ಮ ಸಲಹೆಗಳೇನು?**

ಮೂಢನಂಬಿಕೆಗಳ ಪ್ರಬಂಧಕ ಕಾಯ್ದೆಯ ಕರಡನ್ನು ಗಮನಿಸಿರುವೆ. ಹಲವು ಅಂಶಗಳು ಸೂಕ್ತವಾಗಿದೆ. ಆದರೆ ಅದರಲ್ಲಿ ಇನ್ನಷ್ಟು ಸೂಕ್ಷ್ಮ ವಿಷಯಗಳನ್ನು ಸೇರಿಸಬೇಕೆನಿಸುತ್ತದೆ. ಕೇವಲ ಬೆಂಗಳೂರಿನ ಪ್ರಗತಿಪರರಷ್ಟೇ ಸೇರಿ ಇದನ್ನು ಸಿದ್ಧ ಪಡಿಸುವುದಕ್ಕಿಂತಾ ಒಂದಿಷ್ಟು ಕಾಲಾವಧಿಯನ್ನು ತೆಗೆದುಕೊಂಡು, ಆಳವಾದ ಅಧ್ಯಯನ ಮಾಡಿ, ಪ್ರತಿ ಜಿಲ್ಲೆಯಲ್ಲೂ ಇದಕ್ಕೆ ಸಲಹಾ ಮಂಡಳಿಯನ್ನು ನೇಮಿಸಿ ಆ ಭಾಗದ, ಮೌಢ್ಯ ಮತ್ತು ಜೀವ ವಿರೋಧಿ ಆಚರಣೆಗಳ ಕುರಿತು ವಿಷಯವನ್ನು ಸಂಗ್ರಹಿಸಬೇಕು. ಚರ್ಚಿಸಬೇಕು. ಜೊತೆಗೆ ಮಹಿಳೆಯರಿಗೆ ಸಂಬಂಧಿಸಿದ ಅನೇಕ ಅಮಾನವೀಯವಾದ ಆಚರಣೆಗಳ ಕುರಿತೂ ಪ್ರಗತಿಪರ ಮಹಿಳೆಯರನ್ನು ಒಳಗೊಂಡು ಪೂರ್ವ–ಪರ ವಿವೇಚಿಸಬೇಕು. ಹಾಗೆ ಗುಡ್ಡಗಾಡು ಮತ್ತು ಗಿರಿಜನರ ನಂಬಿಕೆಗಳನ್ನು ಬೇರೆಯದೇ ನೆಲೆಗಟ್ಟಿನಲ್ಲಿ ಚಿಂತಿಸಬೇಕಿದೆ. ಅಲ್ಪಸಂಖ್ಯಾತ ಕೋಮಿನವರ ಅನೇಕ ಆಚರಣೆಗಳೂ ಪ್ರಶ್ನಾರ್ಹವಾಗಿವೆ. ಅವುಗಳನ್ನು ಪ್ರಶ್ನಿಸುವ ಧೈರ್ಯ ನಮ್ಮಲ್ಲಿಲ್ಲದಿದ್ದರೆ ಈ ಕಾಯ್ದೆಗೆ ಸಮಗ್ರತೆ ಬರಲು ಹೇಗೆ ಸಾಧ್ಯ?

೩೪. **ದಲಿತ–ಬಂಡಾಯ ಸಾಹಿತ್ಯ ಚಳವಳಿಗಳ ನಂತರ ಕನ್ನಡದಲ್ಲಿ ಸಾಹಿತ್ಯ ಚಳವಳಿಗಳು ನಿಂತು ಹೋದವೇ?**

ಮೇಲ್ನೋಟಕ್ಕೆ ನಿಂತು ಹೋದಂತೆ ಕಾಣಿಸುತ್ತಿದೆ. ಆದರೆ ನಿಜವಾದ ಚಳವಳಿಯ ಪಕ್ವತೆ ಇರುವುದು ಅದರ ಒಲ ಹರಿವಿನಲ್ಲಿ. ದಲಿತ–ಬಂಡಾಯ–ಸ್ತ್ರೀವಾದಿ ಸಾಹಿತ್ಯ ಚಳವಳಿಗಳ ಸಾರವನ್ನು ಹೀರಿಕೊಂಡು ಪಕ್ವವಾಗಿಸಿ, ಇಂದಿನ ತಲೆಮಾರು ಅದನ್ನು ಸಾವಯವಗೊಳಿಸಿ ಅಭಿವ್ಯಕ್ತಿಸುತ್ತಿದ್ದಾರೆನಿಸುತ್ತದೆ. ಹೀಗಾಗಿ ಅವರ ಬರವಣಿಗೆ ಸಶಕ್ತವಾಗಿದೆ. ಬಹುಶಃ ಒಳ ಪ್ರತಿರೋಧ ನಿರಂತರವಾಗಿ ಮತ್ತು ಸ್ಪಷ್ಟವಾಗಿ ಕನ್ನಡ ಸಾಹಿತ್ಯದಲ್ಲಿ ನಡೆಯುತ್ತಿದೆ ಎನ್ನಿಸುತ್ತದೆ.

**೩೫. ಇವತ್ತಿನ ಡಾಟ್‌ಕಾಮ್ ಯುಗದಲ್ಲಿ ಪುಸ್ತಕ ಪ್ರಕಟಣೆ ಒಂದು ಸವಾಲಾಗಿದೆ. ಈ ಬಗ್ಗೆ ನಿಮ್ಮ ವಿಚಾರವೇನು?**

ಹಾಗೇನೂ ಇಲ್ಲ. ಸದ್ಯ ಕನ್ನಡದಲ್ಲಿ ವರ್ಷಕ್ಕೆ ೫೦೦೦ಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗುತ್ತಿರುವ ಅಂದಾಜಿದೆ. ಪ್ರಕಟಣೆಗಿಂತ ಅದನ್ನು ಜನರಿಗೆ ತಲುಪಿಸುವ, ತಲುಪಿದ ನಂತರ ಓದಿಸುವ ಸವಾಲೇ ತುಂಬಾ ದೊಡ್ಡದೆನಿಸುತ್ತದೆ. ಈ ಡಾಟ್ ಕಾಂ ಯುಗದಲ್ಲೂ ಕವಿತೆ ಹುಟ್ಟುತ್ತದೆ. ಬಹುಶಃ ಮನುಷ್ಯ ಜೀವಂತವಾಗಿರುವವರೆಗೂ ಯಾವುದೇ ಯುಗದಲ್ಲೂ ಸಾಹಿತ್ಯ ಜೀವಂತವಾಗಿರುತ್ತದೆ. ಭಯಪಡಬೇಕಿಲ್ಲ.

**೩೬. ಇತ್ತೀಚೆಗೆ ಕನ್ನಡ ಸಾಹಿತ್ಯದಲ್ಲಿ ನಡೆಯುತ್ತಿರುವ ಸಂಸ್ಕೃತಿಯ ಮರುಚಿಂತನೆ ಬಗ್ಗೆ ಏನು ಹೇಳುತ್ತೀರಿ?**

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ನಡೆದ ಸಂಸ್ಕೃತಿಯ ಪುನರ್ ವ್ಯಾಖ್ಯಾನದಿಂದ ನಮ್ಮ ಸಂಸ್ಕೃತಿಯ ಪರಿಕಲ್ಪನೆಯನ್ನೇ ಮರು ಅಧ್ಯಯನಕ್ಕೆ ಒಳಪಡಿಸುವ ತುರ್ತು ಬಂದೊದಗಿತು. ಹೀಗಾಗಿ ಅಲ್ಲಿಯವರೆಗೆ ಮೇಲ್ಜಾತಿ, ಮೇಲ್ವರ್ಗಗಳ ಗ್ರಹಿಕೆಯ ಸೀಮಿತ ಅರ್ಥದ ಚೌಕಟ್ಟಿನಲ್ಲಿದ್ದ ಕೇವಲ ಶಿಷ್ಟ ಸಂಸ್ಕೃತಿಯು, ತಳಸಮುದಾಯಗಳು ಮತ್ತು ತಳವರ್ಗಗಳ ಸಂಸ್ಕೃತಿಯ ಅಧ್ಯಯನ ಮತ್ತು ದಾಖಲೀಕರಣಕ್ಕೂ ವಿಸ್ತರಿಸಿಕೊಂಡು ವಿಶಾಲ ಹರವನ್ನು ಪಡೆದುಕೊಂಡಿತು. ಆದರೆ ಇದನ್ನು ಉಪಸಂಸ್ಕೃತಿ, ಪರ್ಯಾಯ ಸಂಸ್ಕೃತಿ ಎಂಬ ಹೆಸರಿನಿಂದ ಕರೆಯುವುದೂ ಅಷ್ಟೇನೂ ಸರಿಯಲ್ಲವೆಂದು ನನಗೆನ್ನಿಸುತ್ತದೆ. ನಮ್ಮ ಸಂಸ್ಕೃತಿ ಒಳಗೊಳ್ಳಬೇಕಾಗಿದ್ದ, ಇದುವರೆಗೆ ಬಿಟ್ಟುಹೋಗಿದ್ದ ವಿವಿಧ ಆಯಾಮಗಳ ಮುಖ್ಯಧಾರೆಯ ಸಂಸ್ಕೃತಿಯಲ್ಲಿಯೇ ಇವುಗಳೂ ಸೇರ್ಪಡೆಯಾಗಿ, ಪುನರ್ ಸ್ಥಾಪಿತಗೊಳ್ಳಬೇಕೆನಿಸುತ್ತದೆ. ಇದರೊಂದಿಗೆ ಮಹಿಳೆಯ ಸಾಂಸ್ಕೃತಿಕ ಸಂಕಥನವೂ, ಮೌಖಿಕ ಸಂಸ್ಕೃತಿಯೂ ಅಧ್ಯಯನಕ್ಕೊಳಪಡುವ, ಆದಿಯಿಂದ ದಾಖಲಾಗುವ ತುರ್ತು ಇದೆ ಎನ್ನಿಸುತ್ತದೆ.

**೩೭. ಮಹಿಳೆಗೆ ರಾಜಕೀಯದಲ್ಲಿ ಮೀಸಲಾತಿ ನೀಡುವ ಬಗ್ಗೆ ನಿಮ್ಮ ವಿಚಾರಗಳೇನು?**

ಖಂಡಿತಾ ರಾಜಕೀಯದಲ್ಲಿ ಮಹಿಳೆಗೆ ಮೀಸಲಾತಿ ಬೇಕು. ಅದು ಅವಳ ಸಾಂಪಿಧಾನಿಕ ಹಕ್ಕು. ಮೀಸಲಾತಿ ಇಲ್ಲದಿದ್ದರೆ ಪುರುಷಾಧಿಕಾರದ ನಮ್ಮ ವ್ಯವಸ್ಥೆಯೊಳಗೆ ಮಹಿಳೆ ರಾಜಕೀಯ ಪ್ರವೇಶಿಸುವುದು ಸಾಧ್ಯವಾಗುವುದಿಲ್ಲ. ಭಾರತದಲ್ಲಿ ಪಿತೃಪ್ರಧಾನ ಕುಟುಂಬ ಮೌಲ್ಯಗಳು ಗಟ್ಟಿಯಾಗಿ ಬೇರುಬಿಟ್ಟಿರುವುದರಿಂದಾಗಿ ಇಲ್ಲಿ ಲಿಂಗತಾರತಮ್ಯ ಅತ್ಯಂತ ಸಹಜಕ್ರಿಯೆ ಎಂಬಂತೆ ನಡೆದು ನಾಯಕತ್ವದ ಗುಣವಿರುವ ಮಹಿಳೆಯರೂ ರಾಜಕೀಯದಿಂದ

ದೂರವೇ ಉಳಿಯುಂತಾಗಿದೆ. ಮಹಿಳೆಯನ್ನು ರಾಜಕೀಯದಲ್ಲಿ ಒಳಗೊಳ್ಳಲು ಇಷ್ಟವಿಲ್ಲದ ಪುರುಷ ಚಕ್ರಾಧಿಪತ್ಯದಿಂದಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಶೇ. ೫೦ ಮೀಸಲಾತಿ ಇತ್ತೀಚೆಗೆ ಸಿಕ್ಕಿದ್ದರೂ, ಪ್ರಮುಖ ನಿರ್ಧಾರ ನಿರ್ಣಯಗಳನ್ನು ತೆಗೆದುಕೊಳ್ಳುವ ರಾಜ್ಯ-ರಾಷ್ಟ್ರ ರಾಜಕಾರಣದಲ್ಲಿ ಇಂದಿಗೂ ಅಧಿಕಾರ ಮರುಹಂಚಿಕೆಯ ಮೀಸಲಾತಿಯಿಂದ ಮಹಿಳೆ ದೂರವೇ ಉಳಿದಿದ್ದಾಳೆ. ಮೀಸಲಾತಿ ನೀಡಿದರೆ ಅಷ್ಟು ಪ್ರಮಾಣದ ಪುರುಷರು ಅಧಿಕಾರ ಕಳೆದುಕೊಳ್ಳುವ ಭಯದಿಂದಾಗಿ ಮಹಿಳಾ ಮೀಸಲು ವಿಧೇಯಕ ಎಲ್ಲ ಪಕ್ಷದವರಿಂದಲೂ ಉಪೇಕ್ಷೆಗೊಳಪಟ್ಟಿದೆ. ಹಾಗೇ ಎಲ್ಲಾ ಪಕ್ಷಗಳಲ್ಲೂ ಸ್ವತಂತ್ರ ವ್ಯಕ್ತಿತ್ವದ ಮಹಿಳೆಗೆ ಟಿಕೇಟ್ ನೀಡುವ ಪ್ರಮಾಣ ಕಡಿಮೆ. ಆದರೆ ರಾಜಕೀಯ ಭಾಗವಹಿಸುವಿಕೆ ಯಾರದೋ ಕೃಪಾಕಟಾಕ್ಷವಲ್ಲ ಅದು ತನ್ನ ಹಕ್ಕು ಎಂಬ ಆತ್ಮವಿಶ್ವಾಸ ಮೂಡಿ, ರಾಜಕೀಯದ ತರಬೇತಿ ಹಾಗೂ ತಯಾರಿ ಎರಡೂ ಮೂಲಮಟ್ಟದಿಂದ ದೊರಕಿದರೆ ಮಹಿಳೆ ರಾಜಕೀಯದಿಂದ ದೂರ ಉಳಿಯಲು ಸಾಧ್ಯವಿಲ್ಲವೆನಿಸುತ್ತದೆ. ಈ ಬದಲಾವಣೆಯನ್ನು ತರಲಾದರೂ ಮಹಿಳೆಗೆ ರಾಜಕೀಯ ಮೀಸಲಾತಿ ಅತ್ಯಂತ ಅವಶ್ಯಕವೆನಿಸುತ್ತದೆ.

೩೮. **ಈವರೆಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಮೂರು ಮಂದಿ ಮಹಿಳಾ ಲೇಖಕರು ಮಾತ್ರ ಅಧ್ಯಕ್ಷರಾಗಿದ್ದಾರೆ. ಈ ಬಗ್ಗೆ ನಿಮ್ಮ ಅನಿಸಿಕೆಯೇನು?**

ಶತಮಾನಗಳಿಂದ ಅಕ್ಷರ ಕಲಿಕೆಯಿಂದ ವಂಚಿತಳಾಗಿದ್ದ ಮಹಿಳೆ, ಕಳೆದ ಶತಮಾನದಿಂದಷ್ಟೇ ಒಂದಿಷ್ಟು ಮುಕ್ತವಾಗಿ ಶಿಕ್ಷಣವನ್ನು ಪಡೆಯುವಂತಾಗಿದೆ. ಸಾಹಿತ್ಯ ಕ್ಷೇತ್ರಕ್ಕಂತೂ ಹೆಚ್ಚಿನ ಮಹಿಳೆಯರ ಪ್ರವೇಶವಾಗಿದ್ದು ಇತ್ತೀಚೆಗಿನ ಕೆಲ ದಶಕಗಳಿಂದಷ್ಟೇ. ಹೀಗಾಗಿ ಮೂರು ಮಂದಿ ಲೇಖಕಿಯರು ಮಾತ್ರ ಅಧ್ಯಕ್ಷರಾದ ಬಗ್ಗೆ ಚಿಂತಿಸಬೇಕಾದ ಅವಶ್ಯಕತೆಯಿಲ್ಲವೆನಿಸುತ್ತದೆ. ಇತ್ತೀಚೆಗೆ ಮಹಿಳೆಯರು ಎಲ್ಲ ಪ್ರಕಾರಗಳ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಪುರುಷರಿಗೆ ಸಮಾನವಾದ ಸಾಧನೆಯನ್ನು ಮಾಡುತ್ತಿದ್ದಾರೆ. ಅದನ್ನು ಗೌರವಿಸಿ ಅವಕಾಶಗಳು ಅವಳಿಗೆ ತಾನಾಗಿಯೇ ದಕ್ಕಬೇಕು. ಭಿಕ್ಷೆ ಬೇಡಿ ಅವಕಾಶವನ್ನೂ, ಅಧಿಕಾರವನ್ನೂ ಪಡೆಯುವ ಅವಶ್ಯಕತೆ ಮಹಿಳೆಗೆ ಇಲ್ಲ.

೩೯. **ಅಂಕವಿಕಲತೆ ಒಂದು ಶಾಪವೇ?**

ವ್ಯಕ್ತಿಗತವಾಗಿ ವಿಕಲಚೇತನರಲ್ಲಿ ಆತ್ಮವಿಶ್ವಾಸ, ಧೈರ್ಯ, ಸ್ವಾಭಿಮಾನಗಳಿದ್ದು, ವಾತಾವರಣವೂ ಪೂರಕವಾಗಿದ್ದರೆ ಅಂಗವಿಕಲತೆ ಶಾಪವಾಗುವುದಿಲ್ಲ. ಆದರೆ ನಮ್ಮ ಸಮಾಜದ ಹಿನ್ನೆಲೆಯಲ್ಲಿ ನೋಡಿದಾಗ, ಅಂಗವೈಕಲ್ಯತೆ ಕುರಿತು ಸೂಕ್ಷ್ಮತೆಗಳಿಲ್ಲದ, ವಿಕಲಚೇತನ ಸ್ನೇಹಿ ವಾತಾವರಣ ಹಾಗೂ ಸರ್ಕಾರಿ ಸವಲತ್ತುಗಳೂ, ಅನುಕೂಲತೆಗಳೂ ಇಲ್ಲದ ಸಂದರ್ಭದಲ್ಲಿ ಅಂಗವಿಕಲತೆ

ಶಾಪವಾಗಿ ಪರಿಣಮಿಸಿಬಿಡುತ್ತದೆ. ಅವರಿಗೆ ಮಾಸಾಶನ ನೀಡಿ ಕೈತೊಳೆದುಕೊಂಡರೆ ಸಾಕೆಂಬ ಸರ್ಕಾರಗಳ ಮನೋಭಾವ ಬದಲಾಗಿ ಅವರನ್ನು ಧೀಮಂತ ವ್ಯಕ್ತಿಗಳಾಗುವಂತೆ ರೂಪಿಸುವ ವಿಶೇಷ ಹೊಣೆಗಾರಿಕೆಯನ್ನು ಸರ್ಕಾರ ಹೊರಬೇಕು. ಅವರು ತಮ್ಮ ಅಂಗವಿಕಲತೆ ಮರೆತು ಮುಖ್ಯವಾಹಿನಿಯಲ್ಲಿ ಒಂದಾಗುವಂತೆ ಪೂರಕ ಪರಿಸರವನ್ನು ನಿರ್ಮಾಣ ಮಾಡಿದಾಗ ಅವರೂ ತಾವೊಂದು ವ್ಯಕ್ತಿ ಎಂಬ ಘನತೆಯಿಂದ ಬೆಳೆಯಲು, ಬದುಕಲು ಸಾಧ್ಯವಾಗುತ್ತದೆ. ವಿಶೇಷ ಅಂಗವೈಕಲ್ಯಗಳಿಗೆ ತುತ್ತಾಗಿರುವ ಹೆಣ್ಣುಮಕ್ಕಳಿಗೆ, ಅಂಗವೈಕಲ್ಯತೆ ಒಂದು ಶಾಪವಾದರೆ, ತಮ್ಮ ದೇಹವನ್ನು ದೌರ್ಜನ್ಯಗಳಿಂದ ರಕ್ಷಿಸಿಕೊಳ್ಳಲಾಗದ ಅಸಹಾಯಕತೆ ಇನ್ನೊಂದು ಶಾಪವಾಗಿಬಿಡುತ್ತದೆ.

**೪೦. ಸುಪ್ರಿಂಕೋರ್ಟ್‌ನ ಸಂವಿಧಾನಪೀಠದ ಭಾಷಾ ಮಾಧ್ಯಮ ತೀರ್ಪಿನ ಕುರಿತು ನಿಮ್ಮ ಅಭಿಪ್ರಾಯವೇನು?**

ಭಾಷಾಮಾಧ್ಯಮದ ವಿರುದ್ಧವಾದ ಸುಪ್ರೀಂಕೋರ್ಟ್ ತೀರ್ಪು ಅತ್ಯಂತ ದುರದೃಷ್ಟಕರವಾದುದಾಗಿದೆ. ಅದನ್ನು ಪುನರ್ ಪರಿಶೀಲಿಸುವ ತುರ್ತು ಅಗತ್ಯವಾಗಿದೆ. ಈ ತೀರ್ಪಿನ ಪರಿಣಾಮದಿಂದಾಗಿ ಸಾಮಾಜಿಕ ಅಸಮಾನತೆ ಇನ್ನಷ್ಟು ಹೆಚ್ಚುವ ಸಾಧ್ಯತೆಗಳಿವೆ. ಬಡವರಿಗೆ ಮಾತೃಭಾಷಾ ಮಾಧ್ಯಮ ಸರ್ಕಾರಿ ಶಿಕ್ಷಣ ಉಳ್ಳವರಿಗೆ ಆಂಗ್ಲ ಮಾಧ್ಯಮ ಖಾಸಗಿ ಶಿಕ್ಷಣವೆಂದಾದರೆ ಈಗಾಗಲೇ ಸಾಮಾಜಿಕ ತಾರತಮ್ಯದಿಂದ ಶೋಷಣೆಗೊಳಗಾಗಿರುವ ತಳವರ್ಗ ಮತ್ತು ತಳಸಮುದಾಯಗಳು ಮತ್ತಷ್ಟು ವಂಚನೆಗೊಳಗಾಗುತ್ತವೆ. ಶಿಕ್ಷಣ ಖಾಸಗೀಕರಣದ ಕರಾಳ ಮುಖಗಳನ್ನು ಸಂವಿಧಾನಪೀಠ ಆಳವಾಗಿ ಅಧ್ಯಯನ ಮಾಡಿದ್ದರೆ ಈ ಅಸಮಾನತೆಗಳು ಗೋಚರಿಸುತ್ತಿದ್ದವು. ಇದು ಕನ್ನಡ ಭಾಷೆಯ ಪ್ರಶ್ನೆ ಮಾತ್ರವಲ್ಲ. ಎಲ್ಲ ಪ್ರಾದೇಶಿಕ ಭಾಷೆಗಳ ಅಳಿವು, ಉಳಿವಿನ ಪ್ರಶ್ನೆಯೂ ಭಾಷೆಯ ಪ್ರಶ್ನೆ ಮಾತ್ರವಲ್ಲ. ಎಲ್ಲ ಪ್ರಾದೇಶಿಕ ಭಾಷೆಗಳ ಅಳಿವು, ಉಳಿವಿನ ಪ್ರಶ್ನೆಯೂ ಹೌದು ಜೊತೆಗೆ ಇದು ಭಾಷೆಯ ಪ್ರಶ್ನೆ ಮಾತ್ರವೂ ಅಲ್ಲ. ಇದು ಇಡೀ ಸಾಂಸ್ಕೃತಿಕ, ಸಾಹಿತ್ಯಿಕ, ಸಾಮಾಜಿಕ ವ್ಯವಸ್ಥೆಯನ್ನು ಮೂಲಮಟ್ಟದಲ್ಲಿ ಪೊಳ್ಳುಗೊಳಿಸುವ ತೀರ್ಪೂ ಹೌದು. ಭಾಷೆಯ ಬಹುತ್ವವನ್ನು ಒಡೆದು ಮಾರುಕಟ್ಟೆ ಕೇಂದ್ರಿತ ಆಂಗ್ಲಭಾಷೆಯ ಏಕರೂಪವನ್ನು ಹೇರುವ ಹುನ್ನಾರವೂ ಹೌದು. ಇದಕ್ಕೆ ಸಾರ್ವಜನಿಕ, ಸಮೀಪ ಮತ್ತು ಸಮಾನ ಶಿಕ್ಷಣ ವ್ಯವಸ್ಥೆಯನ್ನು ರೂಪುಗೊಳಿಸುವಂತೆ ಸಂವಿಧಾನ ತಿದ್ದುಪಡಿ ತರುವಂತೆ ಒತ್ತಡ ಹೇರುವುದಷ್ಟೇ ಉಳಿದಿರುವ ಮಾರ್ಗ.

೪೧. **ಮುಂದಿನ ನಿಮ್ಮ ಕಾವ್ಯದ ನಡಿಗೆ ಹೇಗಿರುತ್ತದೆ?**

ಗೊತ್ತಿಲ್ಲ! ಕಾವ್ಯವೆನ್ನುವುದು ಅಮೂರ್ತ ನೆಲೆಯಿಂದ ಹುಟ್ಟುವುದಾಗಿರುವುದರಿಂದ ಅದರ ನಡಿಗೆಯನ್ನು ಇಷ್ಟೇ ಹೀಗೇ ಎಂಬ ತರ್ಕದ ಚೌಕಟ್ಟಿಗೆ ಸೀಮಿತಗೊಳಿಸಿ ನಿರ್ಧರಿಸುವುದಾದರೂ ಹೇಗೆ? ಸುಪ್ತಪ್ರಜ್ಞೆಯಲ್ಲಿ ರೂಪುಗೊಳ್ಳುವ ಸೃಜನಶೀಲ ಸಾಧ್ಯತೆಯನ್ನು ಜಾಗೃತಪ್ರಜ್ಞೆಯಲ್ಲಿ ವಿವೇಚಿಸಲು ಸಾಧ್ಯವಾಗುವುದಿಲ್ಲ. ಅದು ಹೊರಬಿದ್ದ ಮೇಲಷ್ಟೇ ಅದರ ನಡಿಗೆಯನ್ನು ಗುರುತಿಸಬಹುದು. ಯಾವುದೇ ಸೃಜನಶೀಲ ಅಭಿವ್ಯಕ್ತಿಗೆ ಮೊದಲೇ ನಿಗದಿತ ಪ್ರಕಾರವನ್ನೂ ಗೊತ್ತುಪಡಿಸಲು ಸಾಧ್ಯವಿಲ್ಲ ಇಷ್ಟು ಕಾಲ ಕವಿತೆ ಬರೆಯುತ್ತಿದ್ದ ನಾನು ಕಳೆದೊಂದು ವರ್ಷದಿಂದ ದಿಢೀರನೆ ರೇಖಾ ಚಿತ್ರಗಳನ್ನೂ ಬರೆಯಲು ಪ್ರಾರಂಭಿಸಿದೆ! ಮುಂದೆ ಇನ್ಯಾವ ಪ್ರಕಾರದಲ್ಲಿ ಅಭಿವ್ಯಕ್ತಿ ಹೊರಹೊಮ್ಮಬಹುದೋ ಯಾರಿಗೆ ಗೊತ್ತು.

## ೧.೩ ಛಾಯಾಚಿತ್ರಗಳು



ವಿಶ್ವಕನ್ನಡ ಸಮ್ಮೇಳನ – ೨೦೧೧ರಲ್ಲಿ ಕವಯತ್ರಿ ರೂಪ ಹಾಸನ




ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ ಇವರಿಂದ ಕವಯತ್ರಿ ರೂಪ ಹಾಸನ ಅವರಿಗೆ ಮಾತ್ರೋಶ್ರೀ ರತ್ನಮ್ಮ ಹೆಗಡೆ ಪ್ರಶಸ್ತಿ ಪ್ರಧಾನ ಮಾಡುತ್ತಿರುವುದು



ಚೆನ್ನವೀರ ಕಣವಿ ಅವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವ ರೂಪ ಹಾಸನ



ಗೊರೂರು ಪ್ರತಿಷ್ಠಾನ (ರಿ.)ವತಿಯಿಂದ ರೂಪ ಹಾಸನ ಅವರಿಗೆ
ಅತ್ತಿಮಬ್ಬೆ ಸಾಹಿತ್ಯ ಪ್ರಶಸ್ತಿ ಪ್ರಧಾನ ಮಾಡುತ್ತಿರುವುದು




ಕರ್ನಾಟಕ ಸಂಘ, ಶಿವಮೊಗ್ಗ ಇವರಿಂದ ರೂಪ ಹಾಸನ ಅವರಿಗೆ ಪ್ರಶಸ್ತಿ ಪ್ರಧಾನ



ರೂಪ ಹಾಸನ ಅವರಿಗೆ ಶಿಕ್ಷಣ ಸಿರಿ ಪ್ರಶಸ್ತಿ ಪ್ರಧಾನ



ರೂಪ ಹಾಸನ ಅವರಿಗೆ ಪ್ರಶಸ್ತಿ ಪ್ರಧಾನ



ದಸರಾ ಕವಿಗೋಷ್ಠಿ – ೨೦೦೫ರಲ್ಲಿ ರೂಪ ಹಾಸನ ಅವರಿಗೆ ಸನ್ಮಾನ

## ೧.೪ ಆಕರ ಗ್ರಂಥಗಳು


೧. ರೂಪ ಹಾಸನ — **ಒಂದಿಷ್ಟು ಹಸಿಮಣ್ಣು**
ಸಿರಿವರ ಪ್ರಕಾಶನ
ಬೆಂಗಳೂರು
೨೦೦೦

೨. ರೂಪ ಹಾಸನ — **ಬಾಗಿಲಾಚೆಯ ಮೌನ**
ಲೋಹಿಯಾ ಪ್ರಕಾಶನ
ಬಳ್ಳಾರಿ
೨೦೦೫

೩. ರೂಪ ಹಾಸನ — **ಕಡಲಿಗೆಷ್ಟೊಂದು ಬಾಗಿಲು**
ಲೋಹಿಯಾ ಪ್ರಕಾಶನ
ಬಳ್ಳಾರಿ
೨೦೧೦

೪. ರೂಪ ಹಾಸನ — **ಗಳಿಗೆ ಬಟ್ಟಲ ತಿರುವುಗಳಲ್ಲಿ**
ಸಿರಿವರ ಪ್ರಕಾಶನ
ಬೆಂಗಳೂರು
೨೦೧೦

## ೧.೫ ಗ್ರಂಥ ಋಣಗಳು


೧. ಆರ್ಯಾಂಬ ಪಟ್ಟಾಭಿ — **ಮಹಿಳಾ ಸಾಹಿತ್ಯ ಸಮೀಕ್ಷೆ**
ಕನ್ನಡ ಲೇಖಕಿಯರ ಟ್ರಸ್ಟ್
ಮೈಸೂರು
೨೦೦೪

೨. ಇನಾಂದಾರ ವಿ.ಎಂ. — **ಪಾಶ್ಚಾತ್ಯ ಕಾವ್ಯ ಮೀಮಾಂಸೆ**
ಉಷಾ ಸಾಹಿತ್ಯ ಮಾಲೆ
ಮೈಸೂರು
೧೯೮೨

೩. ಕೀರ್ತಿನಾಥ ಕುರ್ತಕೋಟಿ — **ಯುಗಧರ್ಮ ಮತ್ತು ಸಾಹಿತ್ಯ ದರ್ಶನ**
ಮನೋಹರ ಗ್ರಂಥಮಾಲೆ
ಧಾರವಾಡ
೧೯೯೮

೪. ಗಾಯಿತ್ರಿ ನಾವಡ — **ಮಹಿಳಾ ಸಂಕಥನ**
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು
೨೦೦೩

೫. ಗಿರಡ್ಡಿ ಗೋವಿಂದರಾಜ — **ನವ್ಯ ವಿಮರ್ಶೆ**
ಅಕ್ಷರ ಪ್ರಕಾಶನ
ಸಾಗರ
೧೯೭೩

೬. ಗೋಪಾಲಕೃಷ್ಣ ಅಡಿಗ ಎಂ. — **ಸಮಗ್ರ ಕಾವ್ಯ**
ಸ್ವಪ್ನ ಬುಕ್ ಹೌಸ್
ಬೆಂಗಳೂರು
೨೦೧೦

೭. ಚಂದ್ರಶೇಖರ್ — **ಸಾಹಿತ್ಯ ಮತ್ತು ಚರಿತ್ರೆ**
ನಮ್ಮ ಪ್ರಕಾಶನ
ತಿಪಟೂರು
೧೯೯೯

೮. ತಿಪ್ಪೇರುದ್ರಸ್ವಾಮಿ ಎಚ್. — **ಕರ್ನಾಟಕ ಸಂಸ್ಕೃತಿ ಸಮೀಕ್ಷೆ – ೧೯೬೮**
ಡಿ.ವಿ.ಕೆ. ಮೂರ್ತಿ ಪ್ರಕಾಶನ
ಮೈಸೂರು
೨೦೦೭

೯. ತೇಜಸ್ವಿನಿ ನಿರಂಜನ — **ಸೀಮಂತಿನಿ ನಿರಂಜನ**
ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
ಕನ್ನಡ ಸಂಘ, ಕ್ರೈಸ್ಟ್ ಕಾಲೇಜು
ಬೆಂಗಳೂರು
೧೯೯೪

೧೦. ನಾಗಭೂಷಣ ಸ್ವಾಮಿ ಓ.ಎಲ್. — **ವಿಮರ್ಶೆಯ ಪರಿಭಾಷೆ**
ಪರಿಸರ ಸಾಹಿತ್ಯ
ಶಿವಮೊಗ್ಗ
೧೯೮೩

೧೧. ನಾಯಕ ಜಿ.ಹೆಚ್. — **ಶತಮಾನದ ಕನ್ನಡ ಸಾಹಿತ್ಯ**
ರಾಘವೇಂದ್ರ ಪ್ರಕಾಶನ
ಅಂಕೋಲ
೨೦೦೦

೧೨. ನರಸಿಂಹಾಚಾರ್ ಪು.ತಿ. — **ಕಾವ್ಯ ಕುತೂಹಲ**
ಡಿ.ವಿ.ಕೆ. ಮೂರ್ತಿ ಪ್ರಕಾಶನ
ಮೈಸೂರು
೧೯೬೬

೧೩. ಬಸವರಾಜ ಸಬರದ — **ವಚನ ಚಳುವಳಿ**
ಪಲ್ಲವಿ ಪ್ರಕಾಶನ
ಗುಲ್ಬರ್ಗ
೧೯೯೨

೧೪. ಭಗವತಿ ಮೇಲಿನಮನಿ — **ಹೊಸಗನ್ನಡ ಸಾಹಿತ್ಯಾವಲೋಕನ**
ವಿದ್ಯಾನಿಧಿ ಪ್ರಕಾಶನ
ಗದಗ
೨೦೦೨

೧೫. ಮಲ್ಲೇಪುರಂ ಜಿ. ವೆಂಕಟೇಶ — **ತೌಲನಿಕ ಕಾವ್ಯ ಚಿಂತನೆ**
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಮೈಸೂರು
೨೦೧೦

೧೬. ಮೀನಾಕ್ಷಿ ಬಾಳಿ — **ಮನದ ಸೂತಕ ಹಿಂಗಿದೊಡೆ**
ಚಿಂತನ ಪುಸ್ತಕ
ಬೆಂಗಳೂರು
೨೦೧೦

೧೭. ಲೋಕೇಶ್ ಅಗಸನ ಕಟ್ಟೆ — **ಕನ್ನಡ ಕಾವ್ಯ**
ಅಲೋಕ ಪ್ರಕಾಶನ
ಚಿತ್ರದುರ್ಗ
೨೦೦೩

೧೮. ವಿಜಯ್ ಸುಬ್ಬರಾವ್ — **ಸಂಸ್ಕೃತಿ ದನಿಗಳು**
ಅಕ್ಷಯ ಪ್ರಕಾಶನ
ಬೆಂಗಳೂರು
೨೦೦೭

೧೯. ವೀರಣ್ಣದಂಡೆ — **ಕನ್ನಡ ಕಾವ್ಯ ಮೀಮಾಂಸೆ**
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು
೨೦೦೬

೨೦. ಶ್ಯಾಮಸುಂದರ್ ಬಿದರಕುಂದಿ — **ಸಂಸ್ಕೃತಿ ಮಹಿಳಾ ಮಾಲಿಕೆ**
ಸಂಪುಟ – ೪
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು
೨೦೦೮

೨೧. ಶಿವರುದ್ರಪ್ಪ ಜಿ.ಎಸ್. — **ವಿಮರ್ಶೆಯ ಪೂರ್ವ ಪಶ್ಚಿಮ**
ಸಾಹಿತ್ಯ ಭಂಡಾರ ಪ್ರಕಾಶನ
ಬೆಂಗಳೂರು
ಮೊದಲ ಮುದ್ರಣ – ೧೯೬೧
೨೦೦೮

೨೨. ಸವಿತಾ ನಾಗಭೂಷಣ — **ಸ್ತ್ರೀಲೋಕ**
ಅಕ್ಷರ ಪ್ರಕಾಶನ
ಹೆಗ್ಗೋಡು, ಶಿವಮೊಗ್ಗ
ಕರ್ನಾಟಕ
೧೯೯೬

೨೩. ಸುಮಿತ್ರಾಬಾಯಿ — **ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು**
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ
೨೦೦೦

೨೪. ಹಾಲತಿ ಸೋಮಶೇಖರ್ — **ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ**
ವಿಸ್ಮಯ ಪ್ರಕಾಶನ
ಮೈಸೂರು
೨೦೦೭

